# ಮಗುವಿನ ಬೆಳವಣಿಗೆ ಮತ್ತು ಶೈಕ್ಷಣಿಕ ಫಲಿತಾಂಶಗಳ ಮೇಲೆ ಬಡತನದ ಪರಿಣಾಮ

ಪ್ಯಾಟ್ರಿಸ್ ಎಲ್. ಏಂಜಲ್ ಮತ್ತು ಮೌರೀನ್ ಎಮ್ ಬ್ಲ್ಯಾಕ್

...............................................................................................................................

ಜೀವನದ ಆರಂಭಿಕ ವಯಸ್ಸಿನಿಂದ ಪ್ರಾರಂಭಿಸಿ, ನೇರವಾಗಿ ಹಾಗೂ ಪರೋಕ್ಷವಾಗಿ, ಮಧ್ಯಸ್ಥಿಕೆಯ, ವ್ಯಾವಹಾರಿಕ ಪ್ರಕ್ರಿಯೆಗಳ ಮೂಲಕ ಬಡತನವು ಮಗುವಿನ ಬೆಳವಣಿಗೆ ಮತ್ತು ಶೈಕ್ಷಣಿಕ ಫಲಿತಾಂಶಗಳ ಮೇಲೆ ಪರಿಣಾಮ ಬೀರುತ್ತದೆ. ಅಮೆರಿಕದಲ್ಲಿ ಮತ್ತು ಹೆಚ್ಚಾಗಿ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಬಡತನದಿಂದ ಪಾರಾಗಲು ಶಾಲಾ ಸಿದ್ಧತೆ ಅಥವಾ ಶಾಲೆಯ ಬಳಕೆ ಮತ್ತು ಲಾಭಗಳನ್ನು ಉಪಯೋಗಿಸಿಕೊಳ್ಳುವುದರಲ್ಲಿ ಮಗುವಿನ ಸಾಮರ್ಥ್ಯವು ವಿಶಿಷ್ಟವಾದ ಪಾತ್ರ ವಹಿಸುತ್ತದೆಯೆಂದು ಗುರುತಿಸಲಾಗಿದೆ. ಇದು ಮಹತ್ವದ ಅಂಶವಾಗಿದೆ, ಆದರೆ ಸುಧಾರಿತ ಅವಕಾಶಗಳ ಸ್ವರೂಪಗಳು ಮತ್ತು ಕುಟುಂಬಗಳ ಸಬಲೀಕರಣಗಳಂತಹ ಬಡತನದ ತೀವ್ರತೆಯನ್ನು ಕಡಿಮೆ ಮಾಡುವ ಮಾರ್ಗೋಪಾಯಗಳ ಅನೇಕ ಇತರ ಅಂಶಗಳು ಇದನ್ನು ಬೆಂಬಲಿಸಬೇಕು. ಈ ಲೇಖನವು ಅಮೆರಿಕದಲ್ಲಿ ಮತ್ತು ಅಭಿವೃದ್ಧಿಹೊಂದುತ್ತಿರುವ ದೇಶಗಳಲ್ಲಿ ಬಡತನದಲ್ಲಿರುವ ಮಕ್ಕಳ ಶಾಲಾ ಸಿದ್ಧತೆಯನ್ನು ಸುಧಾರಿಸುವ ಮಧ್ಯಸ್ಥಿಕೆಗಳ ಪುರಾವೆಗಳನ್ನು ಪರಿಶೀಲಿಸುತ್ತದೆ ಮತ್ತು ಭವಿಷ್ಯದ ಸಂಶೋಧನೆ ಹಾಗೂ ಕ್ರಮಗಳ ಬಗ್ಗೆ ಶಿಫಾರಸು ಮಾಡುತ್ತದೆ.

ಮುಖ್ಯ ಪದಗಳು: ಬಡತನ, ಮಗುವಿನ ಬೆಳವಣಿಗೆ, ಶಾಲಾ ಸಿದ್ಧತೆ, ಶೈಕ್ಷಣಿಕ ಫಲಿತಾಂಶಗಳು, ಅಭಿವೃದ್ಧಿಶೀಲ ರಾಷ್ಟ್ರಗಳು.

“ಒಂದು ದೇಶ ಕಟ್ಟಲು ಒಂದು ಶಾಲೆ ಕಟ್ಟಿರಿ”

- ಅಮರ್ತ್ಯಸೇನ್- ನೊಬೆಲ್ ಪ್ರಶಸ್ತಿ ವಿಜೇತ ಅರ್ಥಶಾಸ್ತ್ರಜ್ಞರು.

---

## ಪೀಠಿಕೆ:

2000ದ ಇಸವಿಯಲ್ಲಿ ನಡೆದ ಯುನೈಟೆಡ್ ನೇಷನ್ಸ್ ಮಿಲೇನಿಯಮ್ ಶೃಂಗಸಭೆಯಲ್ಲಿ 2015ರ ವೇಳೆಗೆ ಸಾಧಿಸಬೇಕಾದ ಎಂಟು ಅಭಿವೃದ್ಧಿ ಗುರಿಗಳನ್ನು ಅಳವಡಿಸಿಕೊಳ್ಳಲಾಯಿತು. ಮೊದಲ ಎರಡು ಗುರಿಗಳಾದ, ತೀವ್ರ ಬಡತನ ಮತ್ತು ಹಸಿವಿನ ನಿರ್ಮೂಲನೆ ಮತ್ತು ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣವನ್ನು ಸಾಧಿಸುವುದು ಒಂದಕ್ಕೊಂದು ನಿಕಟ ಸಂಬಂಧ ಹೊಂದಿವೆ. ಬಡತನವು ಶೈಕ್ಷಣಿಕ ಸಾಧನೆಗೆ ಮಿತಿಯನ್ನುಂಟುಮಾಡುತ್ತದೆ ಮತ್ತು ಅದೇ ಸಮಯದಲ್ಲಿ ಶೈಕ್ಷಣಿಕ ಸಾಧನೆಯು ಬಡತನದಿಂದ ಪಾರಾಗುವ ಒಂದು ಪ್ರಮುಖ ಕಾರ್ಯವಿಧಾನವಾಗಿದೆ. ಬಡತನವು ಪ್ರಪಂಚದಾದ್ಯಂತ ಒಂದು ನಿರಂತರ ಸಮಸ್ಯೆಯಾಗಿದೆ ಮತ್ತು ಕುಟುಂಬ ಜೀವನದ ಬಹುತೇಕ ಎಲ್ಲಾ ಅಂಶಗಳ ಮೇಲೆ ಮತ್ತು ಮಕ್ಕಳ ಬೆಳವಣಿಗೆಯ ಮೇಲೆ ಹಾನಿಕಾರಕ ಪರಿಣಾಮಗಳನ್ನು ಬೀರುತ್ತದೆ. ಈ ಲೇಖನವು ಬಡತನವು ಮಕ್ಕಳ ಬೆಳವಣಿಗೆ ಮತ್ತು ಶೈಕ್ಷಣಿಕ ಫಲಿತಾಂಶಗಳ ಮೇಲೆ ಪರಿಣಾಮ ಬೀರುವ ಕಾರ್ಯವಿಧಾನಗಳನ್ನು ಮತ್ತು ಯುನೈಟೆಡ್ ಸ್ಟೇಟ್ಸ್ ಮತ್ತು ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಬಡತನದಲ್ಲಿರುವ ಕುಟುಂಬಗಳಿಗೆ ಮಕ್ಕಳ ಬೆಳವಣಿಗೆ ಮತ್ತು ಶೈಕ್ಷಣಿಕ ಫಲಿತಾಂಶಗಳನ್ನು ಸುಧಾರಿಸುವಲ್ಲಿ ನೀಡಿದ ಪರಿಣಾಮಕಾರಿಯಾದ ಮಧ್ಯಸ್ಥಿಕೆಗಳನ್ನು ಪರಿಶೀಲಿಸುತ್ತದೆ.

ನಿರ್ದಿಷ್ಟವಾಗಿ, ಈ ಲೇಖನವು, 1) ಬಡತನ ಮತ್ತು ಮಕ್ಕಳ ಬೆಳವಣಿಗೆಯ/ಅಭಿವೃದ್ಧಿಯ ಪರಿಕಲ್ಪನೆಗಳು; 2) ಕುಟುಂಬದ ಕಾರ್ಯನಿರ್ವಹಣೆ ಮತ್ತು ಸಮುದಾಯ ಪ್ರಕ್ರಿಯೆಗಳು ಸೇರಿದಂತೆ ಬಡತನವು ಮಗುವಿನ ಬೆಳವಣಿಗೆ ಮತ್ತು ಶೈಕ್ಷಣಿಕ ಫಲಿತಾಂಶಗಳ ಮೇಲೆ ಪರಿಣಾಮ ಬೀರುವ ಕಾರ್ಯವಿಧಾನಗಳು, 3) ಮಕ್ಕಳ ಬೆಳವಣಿಗೆಯ ಮೇಲೆ ಬಡತನದ ಋಣಾತ್ಮಕ ಪರಿಣಾಮಗಳನ್ನು ನಿವಾರಿಸಿದ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ಶಿಕ್ಷಣವನ್ನು ಉತ್ತೇಜಿಸಿದ ಕಾರ್ಯಕ್ರಮಗಳು ಮತ್ತು ನೀತಿಗಳು; ಮತ್ತು 4) ಬಡತನದ ಋಣಾತ್ಮಕ ಪರಿಣಾಮಗಳನ್ನು ಕಡಿಮೆ ಮಾಡಲು ಮತ್ತು ಸಾರ್ವತ್ರಿಕ ಶಿಕ್ಷಣವನ್ನು ಉತ್ತೇಜಿಸಲು ಭವಿಷ್ಯದ ಸಂಶೋಧನೆ, ಕಾರ್ಯಕ್ರಮಗಳು ಮತ್ತು ನೀತಿಗಳಿಗೆ ಶಿಫಾರಸುಗಳನ್ನು ಪರಿಶೀಲಿಸುತ್ತದೆ. ಈ ಲೇಖನವು ಬಡತನದ ಜಾಗತಿಕ ಪರಿಣಾಮಗಳನ್ನು ಮತ್ತು ಶೈಕ್ಷಣಿಕ ಫಲಿತಾಂಶಗಳನ್ನು ಅಭಿವೃದ್ಧಿ ಹೊಂದಿದ ಮತ್ತು ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿನ ಸಂಶೋಧನೆಗಳಲ್ಲಿ ಕಂಡುಬಂದಿರುವ ಅಂಶಗಳನ್ನೂ ಒಳಗೊಳ್ಳುವ ಮೂಲಕ ವಿವರಿಸುತ್ತದೆ.

**ಬಡತನದ ವ್ಯಾಖ್ಯಾನ**

ಬಡತನದ ವ್ಯಾಖ್ಯಾನ ಮಾಡುವಾಗ ಹಲವಾರು ವಿವಾದಗಳು ಸಂಭವಿಸುತ್ತವೆ. ಮೊದಲನೆಯದು ಬಡತನವನ್ನು ಆರ್ಥಿಕ ಪರಿಭಾಷೆಯಲ್ಲಿ ವ್ಯಾಖ್ಯಾನಿಸಬೇಕೆ ಅಥವಾ ಅದು, ವಿಶಾಲವಾದ ಸಾಮಾಜಿಕ ಅನನುಕೂಲತೆಯ ಭಾಗವಾಗಿದೆಯೇ ಎಂಬುದು. ಬಡತನದ ಆರ್ಥಿಕ ವ್ಯಾಖ್ಯಾನವು ವಿಶಿಷ್ಟವಾಗಿ ಆದಾಯದ ಕ್ರಮಗಳನ್ನು ಆಧರಿಸಿ, ಸಂಪೂರ್ಣ ಬಡತನ ರೇಖೆಯನ್ನು ಆಹಾರದ ಶಿಫಾರಸುಗಳನ್ನು ಪೂರೈಸಲು ಅಗತ್ಯವಾದ ಆಹಾರ ವೆಚ್ಚ ಹಾಗೂ ಆಹಾರೇತರ ಸರಕುಗಳಿಗೆ ಸಣ್ಣ ಭತ್ಯೆಯನ್ನು ಪೂರಕವಾಗಿಟ್ಟುಕೊಂಡು ಲೆಕ್ಕಹಾಕಲಾಗುತ್ತದೆ.[i] ಆದಾಗ್ಯೂ, ಅನೇಕ ಬಡತನ ಸಂಶೋಧಕರು "ಬಡತನ" ಎಂದರೆ ಭೌತಿಕ ಸ್ವತ್ತುಗಳು ಮತ್ತು ಆರೋಗ್ಯದ ಕೊರತೆ ಮಾತ್ರವಲ್ಲದೆ ಸಾಮಾಜಿಕ ಸಂಬದ್ಧತೆ, ಸಾಂಸ್ಕೃತಿಕ ಗುರುತು, ಗೌರವ ಮತ್ತು ಘನತೆ ಮತ್ತು ಮಾಹಿತಿ ಮತ್ತು ಶಿಕ್ಷಣದಂತಹ ಸಾಮರ್ಥ್ಯಗಳ ಕೊರತೆಗಳನ್ನು ಸೂಚಿಸುವ ವಿಶಾಲವಾದ ವ್ಯಾಖ್ಯಾನವನ್ನು ಬಳಸುತ್ತಾರೆ. ಸೇನ್ ಪ್ರಕಾರ, ಬಡತನ ಎಂದರೆ ಸಾಮರ್ಥ್ಯದ ಕೊರತೆ. ಎರಡನೆಯ ವ್ಯತ್ಯಾಸವೆಂದರೆ ಕೆಲವು ಸಂಶೋಧಕರು ಮತ್ತು ನೀತಿ ನಿರೂಪಕರು ಬಡತನ ಮತ್ತು ಬಡತನದಿಂದ ಪಾರಾಗುವುದು ಪ್ರಾಥಮಿಕವಾಗಿ ವೈಯಕ್ತಿಕ ಸ್ಥಿತಿಯ ಕಾರಣದಿಂದಾಗಿ ಎಂದು ಗ್ರಹಿಸುತ್ತಾರೆ. ಆದರೆ ಇತರರು ಸಾಮಾಜಿಕ ಹೊರತುಪಡಿಸುವಿಕೆಯ ಅಂಶಗಳ ಮೇಲೆ ಗಮನವನ್ನು ಕೇಂದ್ರೀಕರಿಸುತ್ತಾರೆ, ಇದು ಗುಂಪುಗಳು ಅಥವಾ ಜನರ ವರ್ಗಗಳನ್ನು ಬಡತನದಿಂದ ಹೊರಬರುವುದನ್ನು ತಡೆಯುತ್ತದೆ. ವಿಶ್ವಬ್ಯಾಂಕ್‌ನ *voices of the poor* ನ ಕೇಸ್ ಸ್ಟಡಿಗಳ ಸರಣಿಯಲ್ಲಿ ಬಹು ಅಂಶಗಳನ್ನು ವಿವರಿಸಲಾಗಿದೆ. "ವಾಯ್ಸ್ ಆಫ್ ದಿ ಪೂರ್ ಸರಣಿಯಾದ್ಯಂತ ಜನರು ಹಲವಾರು, ಪರಸ್ಪರ ಒಳಗೊಳ್ಳುವ ಅನಾನುಕೂಲಗಳ ಸಮುಚ್ಚಯಗಳನ್ನು ಮತ್ತು ಇದರಿಂದಾಗಿ ಅವರು ಮುಂದೆ ಬರಲು ಅಸಮರ್ಥರಾಗುವುದನ್ನು ಸ್ಪಷ್ಟವಾಗಿ ವಿವರಿಸುತ್ತಾರೆ. ದುಃಸ್ಥಿತಿಯ ಅನುಭವಗಳಾದ ವಸ್ತುಗಳ ಕೊರತೆ ಮತ್ತು ಇತರ ಬೇಡಿಕೆಗಳ ಕೊರತೆ (ಆಹಾರ, ವಸತಿ ಮತ್ತು ಆಶ್ರಯ, ಜೀವನೋಪಾಯ, ಆಸ್ತಿಗಳು ಮತ್ತು ಹಣ); ಹಸಿವು, ನೋವು ಮತ್ತು ಅಸ್ವಸ್ಥತೆ; ಸಮಯದ ಬಳಲಿಕೆ ಮತ್ತು ಸಮಯದ ಅಭಾವ; ಹೊರಗಿಡುವಿಕೆ, ನಿರಾಕರಣೆ, ಪ್ರತ್ಯೇಕತೆ ಮತ್ತು ಒಂಟಿತನ; ಕುಟುಂಬದೊಳಗಿನ ಕೆಟ್ಟ ಸಂಬಂಧಗಳು ಸೇರಿದಂತೆ ಇತರರೊಂದಿಗೆ ಕೆಟ್ಟ ಸಂಬಂಧಗಳು; ಅಭದ್ರತೆ, ದುರ್ಬಲತೆ, ಚಿಂತೆ, ಭಯ ಮತ್ತು ಕಡಿಮೆ ಆತ್ಮ ವಿಶ್ವಾಸ; ಮತ್ತು ಶಕ್ತಿಹೀನತೆ, ಅಸಹಾಯಕತೆ, ಹತಾಶೆ ಮತ್ತು ಕೋಪ".

ಬಡತನವು ಒಂದು ಕ್ರಿಯಾತ್ಮಕ ಪ್ರಕ್ರಿಯೆಯಾಗಿದೆ, ಕೆಲವು ಕುಟುಂಬಗಳು ಅಲ್ಪಾವಧಿಯಲ್ಲಿ ಬಡತನದ ಒಳಗೂ ಹೊರಗೂ ಸುತ್ತುತ್ತಿರುತ್ತಾರೆ, ಇದು ನಿರಂತರ ಬಡತನಕ್ಕಿಂತ ಅನಿರಂತರ ಬಡತನಕ್ಕೆ ಕಾರಣವಾಗುತ್ತದೆ. ಭಾರತ, ಪೆರು ಮತ್ತು ಉಗಾಂಡಾದಲ್ಲಿ 30,000 ಕುಟುಂಬಗಳ ಅಧ್ಯಯನದಲ್ಲಿ ಕೃಷ್ಣ ಅವರು "ಪ್ರಸ್ತುತ ಬಡವರಲ್ಲಿ ಮೂರನೇ ಒಂದು ಭಾಗದಷ್ಟು ಜನರು  ಹುಟ್ಟಿನಿಂದಲೇ ಬಡವರಲ್ಲ; ಅವರು ತಮ್ಮ ಜೀವಿತಾವಧಿಯಲ್ಲಿ ಬಡತನಕ್ಕೆ ಸಿಲುಕಿದ್ದಾರೆ ಮತ್ತು ಅವರ ಸಂತತಿಯು ಬಡತನದಿಂದ ಹೊರಬರಲು ಯಶಸ್ವಿಯಾದವರ ಯಶಸ್ಸಿನ ಕಥೆಗಳನ್ನು ಹೊರಹಾಕುತ್ತದೆ." ಬಡತನದಿಂದ ಹೊರಬರುವ ಚಲನಶೀಲತೆಯನ್ನು ವಿವರಿಸಲು ಎರಡು ಅಂಶಗಳ ನಡುವಿನ ಪರಸ್ಪರ ಅನುಕ್ರಿಯೆಯನ್ನು ಒಳಗೊಂಡಿರುವ ವಿಶ್ಲೇಷಣಾತ್ಮಕ ಮಾದರಿಯನ್ನು ಅಭಿವೃದ್ಧಿಪಡಿಸಲಾಗಿದೆ: 1) ಪ್ರಬಲವಾದ ಸಾಂಸ್ಥಿಕ ವಾತಾವರಣ ಮತ್ತು ಸಾಮಾಜಿಕ ರಚನೆಗಳನ್ನು ಒಳಗೊಂಡಿರುವ *ಅವಕಾಶದ*ಸ್ವರೂಪದಲ್ಲಿನ (opportunity structure) ಬದಲಾವಣೆಗಳು, ಅದರೊಳಗೆ ಅನಾನುಕೂಲಕರ ವ್ಯಕ್ತಿಗಳು ತಮ್ಮ ಹಿತಾಸಕ್ತಿಗಳನ್ನು ಹೆಚ್ಚಿಸಲು ಕೆಲಸ ಮಾಡಬೇಕು ಮತ್ತು 2) ಉದ್ದೇಶಪೂರ್ವಕ ಕ್ರಮಗಳನ್ನು ಕೈಗೊಳ್ಳಲು ಬೇಕಾದ ಬಡ ವ್ಯಕ್ತಿಗಳ ಅಥವಾ ಗುಂಪುಗಳ ಸಾಮರ್ಥ್ಯಗಳಲ್ಲಿನ ಬದಲಾವಣೆಗಳು, ಅಂದರೆ, ಒಂದು ನಿಯೋಗವನ್ನು (agency) ನಿಯೋಜಿಸುವುದು. ಈ ನಿಯೋಗವು ಶಿಕ್ಷಣ ಮತ್ತು ಆತ್ಮ ವಿಶ್ವಾಸಗಳಂತಹ ವೈಯಕ್ತಿಕ ಸಂಪನ್ಮೂಲ/ಸ್ವತ್ತುಗಳನ್ನು(assets), ಮತ್ತು ಸಂಘಟನೆ, ಅಸ್ಮಿತೆ ಮತ್ತು ಅಭಿಪ್ರಾಯ ಪ್ರಕಟಿಸುವಂತಹ ಅವಕಾಶ(having a voice)ಗಳಂತಹ ಸಾಮೂಹಿಕ ಮತ್ತು ಕುಟುಂಬದ ಸಂಪನ್ಮೂಲ/ಸ್ವತ್ತುಗಳನ್ನು ಒಳಗೊಂಡಿರುತ್ತದೆ. ಈ ಲೇಖನದಲ್ಲಿನ ಹೆಚ್ಚಿನ ಚರ್ಚೆಯು "ಬಡವರ ನಿಯೋಗ"ದ ಅಡಿಯಲ್ಲಿನ ಚರಾಂಶಗಳನ್ನು (variables) ಉಲ್ಲೇಖಿಸುತ್ತದೆಯಾದರೂ ಅವಕಾಶಗಳ ಸ್ವರೂಪವು ಸಮಾನ ತೂಕವನ್ನು ಹೊಂದಿರಬಹುದು.

**ಮಕ್ಕಳ ಬೆಳವಣಿಗೆಯ ವ್ಯಾಖ್ಯಾನ ಮತ್ತು ಶೈಕ್ಷಣಿಕ ಫಲಿತಾಂಶಗಳು**

ಮಗುವಿನ ಬೆಳವಣಿಗೆಯು ಸಂವೇದನಾಗತಿಯ (sensorimotor) ಸಂಜ್ಞಾನಾತ್ಮಕ-ಭಾಷೆ (cognitive-language) ಮತ್ತು ಸಾಮಾಜಿಕ-ಭಾವನಾತ್ಮಕ (social-emotional) ಕಾರ್ಯನಿರ್ವಹಣೆಯ ಪರಸ್ಪರ ಅವಲಂಬಿತ ಕೌಶಲ್ಯಗಳ ಕ್ರಮಬದ್ಧವಾದ ಹೊರಹೊಮ್ಮುವಿಕೆಯನ್ನು ಸೂಚಿಸುತ್ತದೆ, ಇದು ಮಗುವಿನ ದೈಹಿಕ ಯೋಗಕ್ಷೇಮ, ಕುಟುಂಬದ ಪರಿಸ್ಥಿತಿ ಮತ್ತು ವಿಶಾಲವಾದ ಸಾಮಾಜಿಕ ವ್ಯವಸ್ಥೆಯನ್ನು ಅವಲಂಬಿಸಿರುತ್ತದೆ. ಈ ಲೇಖನದಲ್ಲಿನ ಶೈಕ್ಷಣಿಕ ಫಲಿತಾಂಶಗಳು ಶಾಲಾ ಸಿದ್ಧತೆ, ಧಾರಣ (retention), ಶಾಲೆ ಬಿಟ್ಟಿರುವುದು (drop-out), ಶೈಕ್ಷಣಿಕ ಸಾಧನೆ ಮತ್ತು ಮಗು ಶಾಲೆಯಲ್ಲಿ ಓದಿದ ವರ್ಷಗಳನ್ನು ಒಳಗೊಂಡಿವೆ. ಶಾಲಾ ಸಿದ್ಧತೆಯು ಔಪಚಾರಿಕ ಶಾಲಾ ಶಿಕ್ಷಣದ ಶೈಕ್ಷಣಿಕ ಅನುಭವಗಳಿಂದ ಮಕ್ಕಳು ಪಡೆಯಬೇಕಾದ ಕೌಶಲ್ಯಗಳನ್ನು ಸೂಚಿಸುತ್ತದೆ. ಸಾಮಾನ್ಯವಾಗಿ ಶಾಲೆಯಲ್ಲಿ ಮಕ್ಕಳ ಕಲಿಯುವ ಸಾಮರ್ಥ್ಯದ ಮೇಲೆ ಪರಿಣಾಮ ಬೀರುವ ವಿಸ್ತೃತ ಸಮುಚ್ಚಯಗಳನ್ನು ಶಾಲಾ ಸಿದ್ಧತೆಯೆಂದು ವ್ಯಾಖ್ಯಾನಿಸಲಾಗಿದ್ದೆ. ಅವುಗಳೆಂದರೆ: ದೈಹಿಕ ಆರೋಗ್ಯ, ಆಂಗಿಕ ಕೌಶಲ್ಯಗಳು (motor skills), ಸ್ವಯಂ-ಆರೈಕೆ (self-care), ಭಾವನಾತ್ಮಕ ಮತ್ತು ನಡವಳಿಕೆಯ ಸ್ವಯಂ- ನಿಯಂತ್ರಣ (emotional and behavioural self-regulation), ಸಾಮಾಜಿಕ ಕೌಶಲ್ಯಗಳು, ಸಂವಹನ ಕೌಶಲ್ಯಗಳು, ಶೈಕ್ಷಣಿಕ- ಪೂರ್ವ ಕೌಶಲ್ಯಗಳು, ಗಮನ, ಮತ್ತು ಕಲಿಯಲು ಕುತೂಹಲ ಮತ್ತು ಪ್ರೇರಣೆ. ಆದರೂ ಇದು ಸಾಕ್ಷರತೆ ಮತ್ತು ಸಂಖ್ಯಾ ಕೌಶಲ್ಯಗಳಿಗೆ ಸೀಮಿತವಾಗಿರಬೇಕು ಎಂದು ಕೆಲವರು ವಾದಿಸುತ್ತಾರೆ.

## ಮಕ್ಕಳ ಬೆಳವಣಿಗೆ ಮತ್ತು ಶೈಕ್ಷಣಿಕ ಫಲಿತಾಂಶಗಳ ಮೇಲೆ ಬಡತನದ ಪ್ರಭಾವ

ಎಲ್ಲಾ ದೇಶಗಳಲ್ಲಿ, ಬಡತನವು ಮಕ್ಕಳು ಮತ್ತು ಕುಟುಂಬಗಳಿಗೆ ದೀರ್ಘಕಾಲದ ಒತ್ತಡವನ್ನು ನೀಡುತ್ತದೆ, ಇದು ಶಾಲೆಯ ಸಾಧನೆ ಸೇರಿದಂತೆ ಬೆಳವಣಿಗೆಯ ಕಾರ್ಯಗಳಿಗೆ, ಯಶಸ್ವಿ ಹೊಂದಾಣಿಕೆಗೆ ಅಡ್ಡಿಯಾಗಬಹುದು. ಕಡಿಮೆ ಆದಾಯದ ಕುಟುಂಬಗಳಲ್ಲಿ ಬೆಳೆದ ಮಕ್ಕಳು ಶೈಕ್ಷಣಿಕ ಮತ್ತು ಸಾಮಾಜಿಕ ಸಮಸ್ಯೆಗಳ ಜೊತೆಗೆ ಅಪರ್ಯಾಪ್ತ ಆರೋಗ್ಯ ಮತ್ತು ಯೋಗಕ್ಷೇಮದ ಅಪಾಯವನ್ನು ಹೊಂದಿರುತ್ತಾರೆ, ಇದು ಶೈಕ್ಷಣಿಕ ಸಾಧನೆಯನ್ನು ದುರ್ಬಲಗೊಳಿಸಬಹುದು.

### ಯುಎಸ್ಎ

ಜೀವನದ ಎರಡನೇ ವರ್ಷದಿಂದ ಪ್ರಾರಂಭವಾಗಿ ಪ್ರಾಥಮಿಕ ಮತ್ತು ಪ್ರೌಢಶಾಲೆಯವರೆಗೆ ಬಡತನ ಮತ್ತು ಮಕ್ಕಳ ಬೆಳವಣಿಗೆ ಮತ್ತು ಶೈಕ್ಷಣಿಕ ಕಾರ್ಯಕ್ಷಮತೆಯ (performance) ನಡುವಿನ ಸಂಬಂಧವನ್ನು ಉತ್ತಮವಾಗಿ ದಾಖಲಿಸಲಾಗಿದೆ. ಶಾಲಾಪೂರ್ವ ವರ್ಷಗಳಲ್ಲಿ ಈ ಅಪಾಯಗಳು ಸಂಭವಿಸಿದಾಗ, ಅವು ದೀರ್ಘಕಾಲೀನ ಪರಿಣಾಮಗಳನ್ನು ಉಂಟುಮಾಡಬಹುದು. ಉದಾಹರಣೆಗೆ, ಶಿಶುವಿಹಾರಕ್ಕೆ ಪ್ರವೇಶಿಸುವ ನಿಟ್ಟಿನ ಶಾಲಾ ಸಿದ್ಧತೆಯು ಭವಿಷ್ಯದ ಯಶಸ್ಸಿನ ಪಥವನ್ನು ನಿರ್ಧರಿಸುತ್ತದೆ. ಶಾಲೆಯ ಸಿದ್ಧತೆಯು ನಂತರದ ಶೈಕ್ಷಣಿಕ ಸಾಧನೆಗೆ ನಿರ್ಣಾಯಕವಾಗಿದೆ ಏಕೆಂದರೆ ಶಾಲಾ ಪ್ರವೇಶದ ವ್ಯತ್ಯಾಸಗಳು ದೀರ್ಘಾವಧಿಯ ಪರಿಣಾಮಗಳನ್ನು ಹೊಂದಿರುತ್ತವೆ. ತಮ್ಮ ಸಮವಯಸ್ಕರಿಗಿಂತ ಗಮನಾರ್ಹವಾಗಿ ನಿಧಾನವಾಗಿ ಶಾಲೆಗೆ ಹೋಗಲು ಪ್ರಾರಂಭಿಸಿದ ಹೆಚ್ಚಿನ ಅಮೆರಿಕನ್ ವಿದ್ಯಾರ್ಥಿಗಳಿಗೆ ಶಾಲಾ ಸಿದ್ಧತೆಯಲ್ಲಿನ ಅಂತರವನ್ನು ತುಂಬುವುದು ಅಸಾಧ್ಯ ಎಂದು ಲೀ ಮತ್ತು ಬರ್ಕ್‌ಮನ್ ಕಂಡುಕೊಂಡರು. ಬದಲಿಗೆ, ಅವರು ಶಾಲೆಯಲ್ಲಿ ಮುಂದುವರಿದಂತೆ ಈ ಅಂತರವು ಹೆಚ್ಚಾಗುತ್ತದೆ. "ಶಾಲಾ ಸಿದ್ಧತೆಯು ವಾಸ್ತವಿಕವಾಗಿ ಪ್ರತಿಯೊಂದು ಶೈಕ್ಷಣಿಕ ಮಾನದಂಡದ ಭವಿಷ್ಯಸೂಚಕವಾಗಿದೆ ಎಂದು ತೋರಿಸಲಾಗಿದೆ (ಉದಾ., ಸಾಧನೆ ಪರೀಕ್ಷೆಯ ಅಂಕಗಳು, ಗ್ರೇಡ್ ಧಾರಣ, ವಿಶೇಷ ಶಿಕ್ಷಣ ನಿಯೋಜನೆ, ಶಾಲೆ ಬಿಡುವುದು, ಇತ್ಯಾದಿ)." ಆರಂಭಿಕ ಶಾಲಾ ವೈಫಲ್ಯದ ಪರಿಣಾಮಗಳು ಗೈರುಹಾಜರಿ, ಶಾಲೆ ಬಿಡುವುದು, ಮತ್ತು ಅನಾರೋಗ್ಯಕರ ಅಥವಾ ಅಪರಾಧದ ನಡವಳಿಕೆಗಳ ಸಾಧ್ಯತೆಯನ್ನು ಹೆಚ್ಚಿಸುತ್ತವೆ. ಯುನೈಟೆಡ್ ಸ್ಟೇಟ್ಸ್‌ನಲ್ಲಿ ಶಿಶುವಿಹಾರಕ್ಕೆ ಪ್ರವೇಶಿಸುವ 30 ರಿಂದ 40% ರಷ್ಟು ಮಕ್ಕಳು ಶಾಲೆಗೆ ಸಿದ್ಧರಾಗಿಲ್ಲ ಎಂದು ಅಂದಾಜಿಸಲಾಗಿದೆ.

ಬಡತನ ಮತ್ತು ಕಡಿಮೆ ಶೈಕ್ಷಣಿಕ ಸಾಧನೆಯ ನಡುವಿನ ಸಂಬಂಧವನ್ನು ಉತ್ತಮವಾಗಿ ಸ್ಥಿತಗೊಳಿಸಲಾಗಿದೆ. ಕಡಿಮೆ-ಆದಾಯದ ಮಕ್ಕಳು ಪದವಿ ಪಡೆಯದೆ ಶಾಲೆಯನ್ನು ತೊರೆಯುವ ಅಪಾಯದ ಸಾಧ್ಯತೆ ಹೆಚ್ಚಾಗಿರುತ್ತದೆ. ಇದರ ಪರಿಣಾಮವಾಗಿ ಯುನೈಟೆಡ್ ಸ್ಟೇಟ್ಸ್‌ನಲ್ಲಿ ಹಣದುಬ್ಬರ-ಹೊಂದಾಣಿಕೆಯ ಆದಾಯವು 1979ರಿಂದ 2005ರವರೆಗೆ 16%ರಷ್ಟು, ಗಂಟೆಗೆ ಸರಾಸರಿ $10ರಷ್ಟು ಕಡಿಮೆಯಾಗಿದೆ. ಶಿಶು ಆರೋಗ್ಯ ಮತ್ತು ಮಾನವ ಅಭಿವೃದ್ಧಿ ಆರಂಭಿಕ ಶಿಶುಪಾಲನಾ ಸಂಶೋಧನಾ ಜಾಲದ ರಾಷ್ಟ್ರೀಯ ಸಂಸ್ಥೆಯ (National Institute of Child Health and Human Development Early Child Care Research Network) ಪುರಾವೆಗಳು ದೀರ್ಘಕಾಲದ ಬಡ ಕುಟುಂಬಗಳಲ್ಲಿನ ಮಕ್ಕಳು ಬಡತನಕ್ಕೆ ಒಡ್ಡಲ್ಪಡುವ ಮಕ್ಕಳಿಗಿಂತ ಕಡಿಮೆ

ಸಂಜ್ಞಾನಾತ್ಮಕ ಮತ್ತು ಶೈಕ್ಷಣಿಕ ಕಾರ್ಯಕ್ಷಮತೆಯನ್ನು ಮತ್ತು ಹೆಚ್ಚಿನ ನಡವಳಿಕೆ ಸಮಸ್ಯೆಗಳನ್ನು ಹೊಂದಿರುತ್ತಾರೆ ಎಂದು ತೋರಿಸಿದೆ. ಭಾಗಶಃ ಇದನ್ನು ಕಡಿಮೆ ಆದಾಯದ ಕುಟುಂಬಗಳಲ್ಲಿ ಉತ್ತೇಜಿಸುವ ನಡವಳಿಕೆಗಳ ಕೊರತೆ ಮತ್ತು ಮನೆಯ ಅನುಭವಗಳ ಆಧಾರದ ಮೇಲೆ ವಿವರಿಸಲಾಗಿದೆ.

## ಅಭಿವೃದ್ಧಿಶೀಲ ರಾಷ್ಟ್ರಗಳು

ಅದೇ ರೀತಿ, ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ, ಬಡತನದಲ್ಲಿರುವ ಮಕ್ಕಳು ಶ್ರೀಮಂತ ಮಕ್ಕಳಿಗಿಂತ ಶಾಲೆಗೆ ಹೋಗದಿರುವ ಹೆಚ್ಚಿನ ಅಪಾಯವನ್ನು ಹೊಂದಿರುತ್ತಾರೆ ಮತ್ತು ಈ ವ್ಯತ್ಯಾಸಗಳು ಹೆಚ್ಚಾಗಿವೆ (ಉದಾಹರಣೆಗೆ, 80 ದೇಶಗಳ ಮಾದರಿಯಲ್ಲಿ, ಉನ್ನತ ಕ್ವಿಂಟೈಲ್‌ನ (quintile- five equal groups) ಕುಟುಂಬಗಳಲ್ಲಿ 12% ಮಕ್ಕಳು, ಬಡ ಕ್ವಿಂಟೈಲ್‌ನಲ್ಲಿರುವ 38% ಮಕ್ಕಳು ಶಾಲೆಗೆ ಹೋಗಲಿಲ್ಲ) ಈ ವ್ಯತ್ಯಾಸಗಳು ನಗರ/ಗ್ರಾಮೀಣ ನಿವಾಸ ಮತ್ತು ಲಿಂಗಗಳಿಗಿಂತ ಸಂಪತ್ತು ಮತ್ತು ತಾಯಂದಿರ ಶಿಕ್ಷಣಕ್ಕೆ ಹೆಚ್ಚು ಸಂಬಂಧಿಸಿವೆ. ಬಡತನದಲ್ಲಿ ಬೆಳೆದ ಮಕ್ಕಳು ಶಾಲೆಯಲ್ಲಿ ಕಡಿಮೆ ಸಾಧನೆ ಮಾಡುತ್ತಾರೆ. ದೇಶಗಳಾದ್ಯಂತ, ವಯಸ್ಸಿನ ಹಂತಗಳಲ್ಲಿ ಮತ್ತು ಅಧ್ಯಯನದ ಶೈಕ್ಷಣಿಕ ಕ್ಷೇತ್ರಗಳಾದ್ಯಂತ ಸಾಮಾಜಿಕ ಆರ್ಥಿಕ ಸ್ಥಿತಿ ಮತ್ತು ವಿದ್ಯಾರ್ಥಿಗಳ ಸಾಧನೆಯ ನಡುವಿನ ಬಲವಾದ ಧನಾತ್ಮಕ ಸಂಬಂಧಗಳನ್ನು ವಿಶ್ಲೇಷಣೆಗಳು ತೋರಿಸುತ್ತವೆ. ಇದಲ್ಲದೆ, ಸಾಮಾನ್ಯವಾಗಿ ಸಾಮಾಜಿಕ ಆರ್ಥಿಕ ಅಂಶವು ವ್ಯತ್ಯಾಸವಾಗುತ್ತಾ ಹೋಗುವ ದರ (socioeconomic gradients) ಎಂದು ಕರೆಯಲ್ಪಡುವ ಸಾಧನೆಯ ಅಂಕಗಳಲ್ಲಿನ ಸಾಮಾಜಿಕ ಆರ್ಥಿಕ ವ್ಯತ್ಯಾಸಗಳು ಹೆಚ್ಚಿನ ದೇಶಗಳಲ್ಲಿ ಕಂಡುಬರುತ್ತವೆ, ಇದು ಶೈಕ್ಷಣಿಕ ಫಲಿತಾಂಶಗಳಲ್ಲಿ ಸಾಮಾಜಿಕ ಆರ್ಥಿಕ ಸ್ಥಿತಿ-ಸಂಬಂಧಿತ ಅಸಮಾನತೆಯನ್ನು ಪ್ರತಿಬಿಂಬಿಸುತ್ತದೆ.

ಮಕ್ಕಳ ಶಿಕ್ಷಣ ಮತ್ತು ಅಭಿವೃದ್ಧಿಯ ಮೇಲೆ ಬಡತನದ ಅಗಾಧ ಪರಿಣಾಮಗಳ ಹೊರತಾಗಿಯೂ, ಕಡಿಮೆ ಆದಾಯದ ಕುಟುಂಬಗಳಲ್ಲಿ ಅಭಿವೃದ್ಧಿ ಹೊಂದಿದ ಮಕ್ಕಳ ಅನೇಕ ಉದಾಹರಣೆಗಳಿವೆ. ಒಂದೇ ಆನುವಂಶಿಕ ಸಂಯೋಜನೆ ಹೊಂದಿರುವ ಇಬ್ಬರು ಮಕ್ಕಳನ್ನು ಒಂದೇ ಸಂದರ್ಭದಲ್ಲಿ ಬೆಳೆಸಿದಾಗಲೂ ಸಹ ಹೊಂದಾಣಿಕೆಯಲ್ಲಿ ವೈಯಕ್ತಿಕ ವ್ಯತ್ಯಾಸವನ್ನು ಅವಳಿ ಅಧ್ಯಯನಗಳು ತೋರಿಸಿವೆ. ದತ್ತು ಅಧ್ಯಯನಗಳು ಮಕ್ಕಳ ಪ್ರಾಥಮಿಕ ಸನ್ನಿವೇಶದಲ್ಲಿನ ಮತ್ತು ಕುಟುಂಬದಲ್ಲಿನ ಬದಲಾವಣೆಗಳು, ಹೇಗೆ ಬಡತನದ ಋಣಾತ್ಮಕ ಪರಿಣಾಮಗಳನ್ನು ನಿವಾರಿಸುತ್ತದೆ ಎಂಬುದರ ವಾಸ್ತವಿಕ ಪ್ರಯೋಗವನ್ನು ಒದಗಿಸುತ್ತದೆ. ಉದಾಹರಣೆಗೆ, ಜೀವನದ ಮೊದಲ 2 ವರ್ಷಗಳು ಸಾಂಸ್ಥಿಕ ಆರೈಕೆಯಲ್ಲಿ ಬೆಳೆದ ಮತ್ತು ನಂತರ ಮಧ್ಯಮ-ಆದಾಯದ ಬ್ರಿಟಿಷ್ ಕುಟುಂಬಗಳಿಗೆ ದತ್ತುಪಡೆದುಕೊಳ್ಳಲಾದ ರೊಮೇನಿಯನ್ ಮಕ್ಕಳ ಅಧ್ಯಯನಗಳು, ಅನೇಕ ಮಕ್ಕಳು ಯುನೈಟೆಡ್ ಕಿಂಗ್ಡಂ (UK) ಮಾನದಂಡಗಳಿಗೆ ಅನುಗುಣವಾಗಿ ಶೈಕ್ಷಣಿಕ ಮತ್ತು ಸಾಮಾಜಿಕ ಅಂಕಗಳನ್ನು ಸಾಧಿಸಿದ್ದಾರೆ ಎಂದು ತೋರಿಸಿವೆ. ಬಡತನದ ಋಣಾತ್ಮಕ ಪರಿಣಾಮಗಳಿಂದ ಕೆಲವು ಮಕ್ಕಳನ್ನು ಉಳಿಸುವ ಸ್ಥಿತಿಸ್ಥಾಪಕತ್ವವು ಕುಟುಂಬಗಳು ಬಡತನವನ್ನು ಹೇಗೆ ನಿಭಾಯಿಸುತ್ತವೆ ಅಥವಾ ತಮ್ಮ ಮಕ್ಕಳ ಹಾಗೂ ಮಕ್ಕಳಲ್ಲಿನ ವೈಯಕ್ತಿಕ ವ್ಯತ್ಯಾಸಗಳ ಉಭಯರಕ್ಷೆಗೆ (buffer) ಸಮರ್ಥವಾಗಿರುತ್ತವೆ ಎಂಬುದರಲ್ಲಿನ ವೈಯಕ್ತಿಕ ವ್ಯತ್ಯಾಸಗಳನ್ನು ಪ್ರತಿಬಿಂಬಿಸಬಹುದು.

### ಬಡತನ ಮತ್ತು ಕುಟುಂಬಗಳು

ಕುಟುಂಬಗಳು ಅವರ ಮಕ್ಕಳಿಗೆ ಸಮಾಜೀಕರಣದ (socializing) ಪ್ರಾಥಮಿಕ ರಾಯಭಾರಿಗಳು (agents). ಮೂಲಭೂತ ಅವಶ್ಯಕತೆಗಳಾದ ಆಹಾರ, ವಸತಿ ಮತ್ತು ಬಟ್ಟೆಗಳನ್ನು ಒದಗಿಸುವುದರ ಜೊತೆಗೆ, ಕುಟುಂಬಗಳು ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಮೌಲ್ಯಗಳನ್ನು ರವಾನಿಸುತ್ತವೆ ಮತ್ತು ಸಾಮಾಜಿಕ ಬೇಡಿಕೆಗಳು ಮತ್ತು ಅವಕಾಶಗಳಿಗೆ ಹೊಂದಿಕೊಳ್ಳಲು ಮಕ್ಕಳಿಗೆ ಸಹಾಯ ಮಾಡುತ್ತವೆ. ಪೋಷಕರು-ಮಕ್ಕಳ ಆರಂಭಿಕ ಪರಸ್ಪರ ಅನುಕ್ರಿಯೆಗಳು ಮಕ್ಕಳು ನಿಯಂತ್ರಣ ಪ್ರಕ್ರಿಯೆಯನ್ನು (regulatory process) ಕಲಿಯಲು ಮತ್ತು ಅವರ ಕುಟುಂಬ ಮತ್ತು ಸಂಸ್ಕೃತಿಯ ಲಯಕ್ಕೆ ಅವರನ್ನು ಸಮಾಜೀಕರಿಸಲು ಸಹಾಯ ಮಾಡುತ್ತದೆ.

ಬಹುತೇಕ ಎರಡು ದಶಕಗಳ ಹಿಂದೆ ಪಾರ್ಕರ್, ಗ್ರೀರ್ ಮತ್ತು ಜುಕರ್‌ಮ್ಯಾನ್ ಗಮನಿಸಿದಂತೆ, ಬಡತನದಲ್ಲಿ ಬೆಳೆಯುತ್ತಿರುವ ಮಕ್ಕಳು "ದುಪ್ಪಟ್ಟು ಅಪಾಯ" (double jeopardy) ಅನುಭವಿಸುತ್ತಾರೆ. ಅನಾರೋಗ್ಯ, ಜನಸಂದಣಿ ಮತ್ತು ಕೌಟುಂಬಿಕ ಒತ್ತಡ, ಮಾನಸಿಕ ಸಾಮಾಜಿಕ ಪ್ರಚೋದನೆಯ ಕೊರತೆ ಮತ್ತು ಸೀಮಿತ ಸಂಪನ್ಮೂಲಗಳು ಸೇರಿದಂತೆ ಅವರ ಮನೆಗಳು ಮತ್ತು ಸಮುದಾಯಗಳಲ್ಲಿನ ಅಪಾಯಗಳಿಗೆ ಅವರು ನೇರವಾಗಿ ಒಡ್ಡಲ್ಪಡುವುದಲ್ಲದೆ ಹೆಚ್ಚಿನ ಆದಾಯದ ಕುಟುಂಬಗಳ ಮಕ್ಕಳಿಗಿಂತ ಅವರು ಅಪಾಯಗಳಿಂದ ಹೆಚ್ಚು ಗಂಭೀರ ಪರಿಣಾಮಗಳನ್ನು ಅನುಭವಿಸುತ್ತಾರೆ. ಕಳೆದ ಹಲವಾರು ದಶಕಗಳಿಂದ ಮಕ್ಕಳ ಮೇಲೆ ಬಡತನದ ದುಷ್ಪರಿಣಾಮಗಳ ಬಗ್ಗೆ ಗಮನ ನೀಡಲಾಗಿದ್ದರೂ, ಬಡತನದ ಪ್ರಮಾಣವು

ವಿಶೇಷವಾಗಿ ಚಿಕ್ಕ ಮಕ್ಕಳು ಇರುವ ಕುಟುಂಬಗಳಲ್ಲಿ ಹೆಚ್ಚಾಗಿಯೇ ಇದೆ, ಮತ್ತು ಬಡತನವು ಮಕ್ಕಳ ಶಿಕ್ಷಣ ಮತ್ತು ಬೆಳವಣಿಗೆಯ ಮೇಲೆ ಪರಿಣಾಮ ಬೀರುವ ಪ್ರಕ್ರಿಯೆಗಳಿಗೆ ಸೀಮಿತ ಗಮನವನ್ನು ನೀಡಲಾಗಿದೆ. ಪ್ರಗತಿಯ ಕೊರತೆಗೆ ಒಂದು ಕಾರಣವೆಂದರೆ ಬಡತನದ ನೇರ ಪರಿಣಾಮಗಳನ್ನು ಒತ್ತಿಹೇಳುವ ಮೂಲಭೂತ ಮಾದರಿಗಳ ಮೇಲೆ ಅತಿಯಾದ ಅವಲಂಬನೆ. ಬಡತನವನ್ನು ಮಕ್ಕಳ ಬೆಳವಣಿಗೆಯೊಂದಿಗೆ ಜೋಡಿಸುವ ಕಾರ್ಯವಿಧಾನಗಳ ಬಗ್ಗೆ ಕಡಿಮೆ ಗಮನಹರಿಸಲಾಗಿದೆ.




**ಚಿತ್ರ ೧.** ಮಕ್ಕಳ ಮೇಲೆ ಬಡತನದ ನೇರ ಪರಿಣಾಮಗಳು

### ಬೆಳವಣಿಗೆಯ ವ್ಯವಸ್ಥೆಗಳ ಸಿದ್ಧಾಂತಗಳು (Developmental Systems Theories)

ಬಡತನವನ್ನು ಮಕ್ಕಳ ಶಿಕ್ಷಣ ಮತ್ತು ಬೆಳವಣಿಗೆಗೆ ಸಂಬಂಧಿಸುವ ಬಹು ಕಾರ್ಯವಿಧಾನಗಳನ್ನು (multiple mechanisms) ಅರ್ಥಮಾಡಿಕೊಳ್ಳಲು ಬೆಳವಣಿಗೆಯ ವ್ಯವಸ್ಥೆಗಳ ಸಿದ್ಧಾಂತಗಳು (developmental systems theories) (**DST**) ಬಹುಶಃ ಉಪಯುಕ್ತವಾಗಬಹುದು. DSTಯು ಪರಿಸರ ವಿಜ್ಞಾನ ಸಿದ್ಧಾಂತವನ್ನು ಆಧರಿಸಿದೆ ಮತ್ತು ವಿವಿಧ ಸ್ತರಗಳಲ್ಲಿ, ಅಂದರೆ ಮೂಲಭೂತ ಜೈವಿಕ ಪ್ರಕ್ರಿಯೆಗಳಿಂದ ಮೊದಲುಗೊಂಡು ವೈಯಕ್ತಿಕ, ಕೌಟುಂಬಿಕ, ಶಾಲೆ, ಸಮುದಾಯ ಮತ್ತು ಸಾಂಸ್ಕೃತಿಕ ಸ್ತರಗಳಲ್ಲಿನ ಪರಸ್ಪರ ಅನುಕ್ರಿಯೆಗಳನ್ನು ಪರಿಕಲ್ಪನೆ ಮಾಡುತ್ತದೆ. ಯಾವುದೇ ವ್ಯವಸ್ಥೆಯ ಮಾದರಿಯಲ್ಲಿರುವಂತೆ, ಪರಸ್ಪರ ಅನುಕ್ರಿಯೆಗಳು ದ್ವಿಮುಖವಾಗಿರುತ್ತವೆ, ಅಂದರೆ, ವ್ಯವಸ್ಥೆಯ ಒಂದು ವಿಷಯದಲ್ಲಿನ ಬದಲಾವಣೆಗಳು ವ್ಯವಸ್ಥೆಯುದ್ದಕ್ಕೂ ಸಂಬಂಧಗಳು ಮತ್ತು ಪ್ರಕಿಯೆಗಳ ಮೇಲೆ ಪರಿಣಾಮ ಬೀರಬಹುದು.

## ಮಕ್ಕಳ ಬೆಳವಣಿಗೆ ಮತ್ತು ಶೈಕ್ಷಣಿಕ ಫಲಿತಾಂಶಗಳ ಮೇಲೆ ಬಡತನದ ಪರಿಣಾಮದ ಕಾರ್ಯವಿಧಾನಗಳು

### ಬಡತನದ ನೇರ ಪರಿಣಾಮಗಳು

ನೇರ ಪರಿಣಾಮಗಳ ಮಾದರಿಯಲ್ಲಿ, ಬಡತನವು ಅಪಾಯದ ಅಂಶಗಳನ್ನು ಹೆಚ್ಚಿಸುವ ಮೂಲಕ ಮತ್ತು ರಕ್ಷಣಾತ್ಮಕ ಅಂಶಗಳು ಮತ್ತು ಪ್ರಚೋದನೆ ಮತ್ತು ಪುಷ್ಟೀಕರಣದ ಅವಕಾಶಗಳನ್ನು ಸೀಮಿತಗೊಳಿಸುವ ಮೂಲಕ ಮಕ್ಕಳ ಶಿಕ್ಷಣ ಮತ್ತು ಬೆಳವಣಿಗೆಯ ಮೇಲೆ ಪ್ರಭಾವ ಬೀರುತ್ತದೆ (ಚಿತ್ರ. 1ನ್ನು ನೋಡಿ). ಉದಾಹರಣೆಗೆ, ಕಡಿಮೆ-ಆದಾಯದ ಕುಟುಂಬಗಳಲ್ಲಿನ ಮಕ್ಕಳು ಆಗಾಗ್ಗೆ ಆಹಾರದ ಅಭದ್ರತೆಗೆ ಸಂಬಂಧಿಸಿದಂತೆ ಅಪೌಷ್ಟಿಕತೆ ಮತ್ತು ಅಧಿಕ ತೂಕ – ಈ ಎರಡೂ ನಿಟ್ಟಿನಲ್ಲಿ ಹೆಚ್ಚಿನ ಅಪಾಯವನ್ನು ಹೊಂದಿರುತ್ತಾರೆ.

ಮಕ್ಕಳ ಮೇಲೆ ಬಡತನದ ಅನೇಕ ಪರಿಣಾಮಗಳು ಕುಟುಂಬಗಳ ನಡವಳಿಕೆಯಿಂದ ಪ್ರಭಾವಿತವಾಗಿರುತ್ತವೆ ಎಂದು ಪುರಾವೆಗಳು ಸೂಚಿಸುತ್ತವೆ. ಕಡಿಮೆ-ಆದಾಯದ ಕುಟುಂಬಗಳು ಸಾಮಾನ್ಯವಾಗಿ ಸೀಮಿತ ಶಿಕ್ಷಣವನ್ನು ಹೊಂದಿರುವುದರಿಂದ ತಮ್ಮ ಮಕ್ಕಳಿಗೆ ಸ್ಪಂದಿಸುವ ಉತ್ತೇಜಕ ವಾತಾವರಣವನ್ನು ಒದಗಿಸುವ ಸಾಮರ್ಥ್ಯವನ್ನು ಕಡಿಮೆಗೊಳಿಸುತ್ತವೆ. ಅವರು ನಕಾರಾತ್ಮಕ ಟೀಕೆಗಳ ಶೇಕಡಾವಾರು ಹೆಚ್ಚಳದೊಂದಿಗೆ ನಿರೂಪಣೆ ಮತ್ತು ವಿಸ್ತೃತ ವಿವರಣೆಗಳ ಬದಲಿಗೆ ಆಜ್ಞೆಗಳು ಮತ್ತು ಸರಳ ರಚನೆಯ ಅಧಿಕಾರಯುತ ಭಾಷೆಯನ್ನು ಬಳಸುವ ಮೂಲಕ ತಮ್ಮ ಮಕ್ಕಳ ಭಾಷಾ ಪರಿಸರವನ್ನು ಮಿತಿಗೊಳಿಸುತ್ತಾರೆ. ಹೆಚ್ಚುವರಿಯಾಗಿ, ಕಡಿಮೆ-ಆದಾಯದ ಕುಟುಂಬಗಳು ಭಾವನಾತ್ಮಕ ಬೆಳವಣಿಗೆ ಮತ್ತು ಸಾಮಾಜಿಕ

ಸಾಮರ್ಥ್ಯವನ್ನು ಉತ್ತೇಜಿಸುವ ಪರಸ್ಪರ, ಸಂವಾದಾತ್ಮಕ ಶೈಲಿಗಳಿಗಿಂತ ಪೋಷಕರ ನಿಯಂತ್ರಣವನ್ನು ಆಧರಿಸಿದ ಕಠಿಣ ಪಾಲಕತ್ವ ಶೈಲಿಗಳನ್ನು (parenting styles) ಬಳಸುತ್ತಾರೆ. ಜೀವನದ ಮೊದಲ ಕೆಲವು ವರ್ಷಗಳಲ್ಲಿ ಓದಿ ಹೇಳುವುದು ಫೋನೆಮಿಕ್ ಅರಿವು ಮತ್ತು ಗ್ರಹಿಕೆ ಕೌಶಲ್ಯಗಳ ಬೆಳವಣಿಗೆಗೆ ಕೊಡುಗೆ ನೀಡುತ್ತದೆ. ಆದಾಗ್ಯೂ, ಬಡ ಕುಟುಂಬಗಳ ಮಕ್ಕಳಿಗೆ ಓದಿ ಹೇಳುವುದು ಉತ್ತಮ ಕುಟುಂಬದ ಮಕ್ಕಳಿಗಿಂತ ಕಡಿಮೆ ಇರಬಹುದು. ಯುನೈಟೆಡ್ ಸ್ಟೇಟ್ಸ್‌ನಲ್ಲಿ ಬಡತನ ರೇಖೆಗಿಂತ ಮೇಲಿರುವ ಕುಟುಂಬಗಳಲ್ಲಿನ 61%ರಷ್ಟಕ್ಕೆ ಹೋಲಿಸಿದರೆ ಅರ್ಧಕ್ಕಿಂತ ಕಡಿಮೆಯಷ್ಟು ಕಡಿಮೆ ಆದಾಯದ ಕುಟುಂಬಗಳಲ್ಲಿರುವ ಶಾಲಾಪೂರ್ವ ಮಕ್ಕಳಿಗೆ ಪ್ರತಿದಿನವು ಓದಿ ಹೇಳುತ್ತಾರೆ.




**ಚಿತ್ರ ೧.** ಮಕ್ಕಳ ಮೇಲೆ ಬಡತನದ ಮಧ್ಯಮ ಪರಿಣಾಮಗಳು




**ಚಿತ್ರ ೨.** ಮಕ್ಕಳ ಮೇಲೆ ಬಡತನದ ಮಧ್ಯಸ್ಥಿಕೆಯ ಪರಿಣಾಮಗಳು

## ಬಡತನದ ಮಧ್ಯಮ ಪರಿಣಾಮಗಳು

ಮಧ್ಯಮ ಪರಿಣಾಮಗಳಲ್ಲಿ ಬಡತನದ ಪರಿಣಾಮಗಳು ಕುಟುಂಬಗಳು ಅಥವಾ ಮಕ್ಕಳ ಗುಣಲಕ್ಷಣಗಳಿಗನುಗುಣವಾಗಿ ಬದಲಾಗುತ್ತವೆ (ನೋಡಿ: ಚಿತ್ರ 2). ಉದಾಹರಣೆಗೆ, ತರ್ಕಬದ್ಧ ನಿರ್ಧಾರ ತೆಗೆದುಕೊಳ್ಳುವ ಕೌಶಲ್ಯಗಳೊಂದಿಗೆ ಉತ್ತಮ ಶಿಕ್ಷಣ ಪಡೆದ ಕುಟುಂಬಗಳಿಗಿಂತ ಕಳಪೆ ನಿರ್ಧಾರ ತೆಗೆದುಕೊಳ್ಳುವ ಕೌಶಲ್ಯದೊಂದಿಗೆ ಕಳಪೆ ಶಿಕ್ಷಣ ಪಡೆದಿರುವ ಕುಟುಂಬಗಳು ತಮ್ಮ ಮಕ್ಕಳನ್ನು ಬಡತನದ ಪರಿಣಾಮಗಳಿಂದ ರಕ್ಷಿಸಲು ಹೆಚ್ಚು ಕಷ್ಟಪಡಬಹುದು.  ಮಕ್ಕಳಿಗೆ ರಕ್ಷಣೆ ಕೊಡುವ ಮೂಲಕವೂ ಮಧ್ಯಮ ಪರಿಣಾಮಗಳು ಉಂಟಾಗಬಹುದು. ಉದಾಹರಣೆಗೆ, ಕೌಟುಂಬಿಕ ಹೂಡಿಕೆ ಮಾದರಿಯು (family investment model) ಉತ್ತಮ ಶಿಕ್ಷಣ ಪಡೆದಿರುವ ಅಥವಾ ಉತ್ತಮ ಹಣಕಾಸಿನ ಸಂಪನ್ಮೂಲಗಳನ್ನು ಹೊಂದಿರುವ ಪೋಷಕರು ಶೈಕ್ಷಣಿಕವಾಗಿ ವರ್ಧಿಸುವ ಸಾಮಗ್ರಿಗಳು (ಪುಸ್ತಕಗಳಂತಹ) ಮತ್ತು ಚಟುವಟಿಕೆಗಳ (ಓದುವಿಕೆ) ಮೂಲಕ ತಮ್ಮ ಮಕ್ಕಳಲ್ಲಿ ಹೂಡಿಕೆ ಮಾಡುತ್ತಾರೆ. ಹೀಗೆ ತಮ್ಮ ಮಕ್ಕಳನ್ನು ಬಡತನದ ಪರಿಣಾಮಗಳಿಂದ ರಕ್ಷಿಸುತ್ತಾರೆ. ಯುವಜನರ ರಾಷ್ಟ್ರೀಯ ದೀರ್ಘಾವಧಿ ಸಮೀಕ್ಷೆಯ (national longitudinal survey of youth) ದತ್ತಾಂಶವನ್ನು ಬಳಸಿಕೊಂಡು ಬ್ರಾಡ್ಲಿ ಮತ್ತು ಸಹೋದ್ಯೋಗಿಗಳು ಬಡತನ ರೇಖೆಗಿಂತ ಕೆಳಗಿರುವ ಕುಟುಂಬಕ್ಕಿಂತ ಬಡತನ ರೇಖೆಗಿಂತ ಮೇಲಿನ ಕುಟುಂಬಗಳು ತಮ್ಮ ಮಕ್ಕಳೊಂದಿಗೆ ಸಂಜ್ಞಾನಾತ್ಮಕ ಅಭಿವೃದ್ಧಿಯ ನಿಟ್ಟಿನ ಚಟುವಟಿಕೆಗಳಲ್ಲಿ ತೊಡಗುವ ಸಾಧ್ಯತೆ ಹೆಚ್ಚು ಎಂದು ತೋರಿಸಿದರು.

ಕುಟುಂಬದ ಗುಣಲಕ್ಷಣಗಳು ಸಾಮಾಜಿಕ ಆಯ್ಕೆ (Social selection) ಎಂದು ಕರೆಯಲ್ಪಡುವ ಪ್ರಕ್ರಿಯೆಯ ಮೂಲಕ ಬಡತನ ಮತ್ತು ಮಕ್ಕಳ ಬೆಳವಣಿಗೆಯ ನಡುವಿನ ಸಂಬಂಧದ ಮೇಲೆ ಪ್ರಭಾವ ಬೀರಬಹುದು. ಸಾಮಾಜಿಕ ಆಯ್ಕೆಯ ದೃಷ್ಟಿಕೋನವು ಪೋಷಕರ ಗುಣಲಕ್ಷಣಗಳಲ್ಲಿನ ವೈಯಕ್ತಿಕ ವ್ಯತ್ಯಾಸಗಳು ಆದಾಯದಲ್ಲಿನ ವ್ಯತ್ಯಾಸಗಳಿಗೆ ಕಾರಣವಾಗುತ್ತವೆ ಇದರಿಂದಾಗಿ ಮಕ್ಕಳ ಬೆಳವಣಿಗೆಯ ಮೇಲೆ ಪರಿಣಾಮ ಬೀರುತ್ತವೆ ಎಂದು ಊಹಿಸುತ್ತದೆ. ಉದಾಹರಣೆಗೆ, ಪ್ರಾಮಾಣಿಕತೆ, ಸಮಗ್ರತೆ ಮತ್ತು ವಿಶ್ವಾಸಾರ್ಹತೆಯಂತಹ ಸಮಾಜಮುಖಿ ಗುಣಲಕ್ಷಣಗಳನ್ನು ಹೊಂದಿರುವ ಪೋಷಕರು ಈ ಮೌಲ್ಯಗಳನ್ನು ತಮ್ಮ ಮಕ್ಕಳಿಗೆ ರವಾನಿಸುತ್ತಾರೆ, ಹೀಗಾಗಿ ಬಡತನವಿದ್ದಾಗಲೂ ರಕ್ಷಣೆ ನೀಡುತ್ತಾರೆ.

## ಬಡತನದ ಮಧ್ಯಸ್ಥಿಕೆಯ ಪರಿಣಾಮಗಳು

ಮಧ್ಯಸ್ಥಿಕೆಯ ಮಾದರಿಗಳಲ್ಲಿ, ಬಡತನದ ಪರಿಣಾಮಗಳನ್ನು ಕುಟುಂಬದ ಕಾರ್ಯಚಟುವಟಿಕೆಗಳಲ್ಲಿನ ಅಡಚಣೆಗಳ ಮೂಲಕ ಅನುಭವಿಸಲಾಗುತ್ತದೆ, ಇದು ಮಕ್ಕಳ ಮೇಲೆ ನಕಾರಾತ್ಮಕ ಪರಿಣಾಮಗಳನ್ನು ಬೀರುತ್ತದೆ (ಚಿತ್ರ. 3). ಕುಟುಂಬಗಳು ಮತ್ತು ಮಕ್ಕಳ ಮೇಲೆ 1930ರ ದಶಕದ ಖಿನ್ನತೆಯ ಪರಿಣಾಮಗಳ ಅಧ್ಯಯನದ ಮೂಲಕ ಈ ಮಾದರಿಯನ್ನು ಅಭಿವೃದ್ಧಿಪಡಿಸಲಾಗಿದೆ. ಇದು ಕುಟುಂಬದ ಒತ್ತಡದ ಮಾದರಿಯೊಡನೆ (family stress model) ಹೊಂದಿಕೊಳ್ಳುತ್ತದೆ. ಇದರಲ್ಲಿ ಆರ್ಥಿಕ ಸಂಕಷ್ಟಕ್ಕೆ ಸಂಬಂಧಿಸಿದ ಬಡತನವು ಕುಟುಂಬದ ಒತ್ತಡಕ್ಕೆ ಕಾರಣವಾಗಬಹುದು ಮತ್ತು ಪೋಷಕರ ಭಾವನಾತ್ಮಕ ಯೋಗಕ್ಷೇಮ ಮತ್ತು ಮಾನಸಿಕ ಆರೋಗ್ಯದ ಮೇಲೆ ಋಣಾತ್ಮಕ ಪರಿಣಾಮ ಬೀರಬಹುದು, ಇದು ಪಾಲಕತ್ವದ (parenting) ನಡವಳಿಕೆಯನ್ನು ದುರ್ಬಲಗೊಳಿಸುತ್ತದೆ ಮತ್ತು ಪೋಷಕರು ಕಠಿಣ ಮತ್ತು ನಿಯಂತ್ರಿಸುವ ಪಾಲಕತ್ವ ವಿಧಾನವನ್ನು ಬಳಸುವ ಸಾಧ್ಯತೆಯನ್ನು ಹೆಚ್ಚಿಸುತ್ತದೆ. ಪರಿಣಾಮವಾಗಿ ಮಕ್ಕಳ ವರ್ತನೆಯ ಮತ್ತು ಬೆಳವಣಿಗೆಯ ಸಮಸ್ಯೆಗಳು ಉಂಟಾಗುತ್ತವೆ. ಬೇರೆ ರೀತಿಯಲ್ಲಿ ಹೇಳುವುದಾದರೆ, ಬಡತನದ ಬೇಗೆಯಿಂದ ಒತ್ತಡಕ್ಕೊಳಗಾದ ಮತ್ತು ಬಡತನದಲ್ಲೇ ಮುಳುಗಿರುವ ಪೋಷಕರಿಗೆ ತಮ್ಮ ಮಕ್ಕಳ ಭಾವನಾತ್ಮಕ, ಸಂಜ್ಞಾನಾತ್ಮಕ ಮತ್ತು ಆರೈಕೆಯ ಅಗತ್ಯಗಳನ್ನು ಪೂರೈಸಲು ಸಾಧ್ಯವಾಗುವುದಿಲ್ಲ. ಕುಟುಂಬದ ಒತ್ತಡದ ಮಾದರಿಯು ಯುನೈಟೆಡ್ ಸ್ಟೇಟ್ಸ್‌ನ ಬಹು-ಜನಾಂಗೀಯ ಹಿನ್ನೆಲೆಯ ಕುಟುಂಬಗಳಿಗೆ ಮತ್ತು ರೊಮೇನಿಯಾ. ಮತ್ತು ಇಂಡೋನೇಷ್ಯಾ ಸೇರಿದಂತೆ ವೈವಿಧ್ಯಮಯ ಸಂಸ್ಕೃತಿಗಳ ಕುಟುಂಬಗಳಿಗೆ ಅನ್ವಯಿಸುತ್ತದೆ ಎಂದು ಕಂಡುಬಂದಿದೆ.

**ಬಡತನದ ವಹಿವಾಟಿನ (transactional) ಪರಿಣಾಮಗಳು**

ವಹಿವಾಟಿನ ಮಾದರಿಗಳಲ್ಲಿ, ಬಡತನದ ಪರಿಣಾಮಗಳು ಕುಟುಂಬಗಳು ಮತ್ತು ಮಕ್ಕಳ ನಡುವಿನ ಸಂಬಂಧಗಳ ಮೂಲಕ ಮಧ್ಯಮ ಮತ್ತು ಮಧ್ಯಸ್ಥಿಕೆಯ ಪ್ರಕ್ರಿಯೆಗಳನ್ನು ಸಂಯೋಜಿಸುವ ಮೂಲಕ ಪ್ರತಿಫಲಿಸುತ್ತವೆ, (ಚಿತ್ರ. 4). ಪೋಷಕರ ಗುಣಲಕ್ಷಣಗಳು ಮಕ್ಕಳ ಬೆಳವಣಿಗೆಯ ಮೇಲೆ ಬಡತನದ ಪ್ರಭಾವವನ್ನು ಮಿತಗೊಳಿಸಬಹುದು, ಅಂತೆಯೇ ಮಕ್ಕಳ ಗುಣಲಕ್ಷಣಗಳು ಇದೇ ರೀತಿಯ ಪಾತ್ರವನ್ನು ವಹಿಸಬಹುದು. ಉದಾಹರಣೆಗೆ, ಕಷ್ಟಕರ ಸ್ವಭಾವವನ್ನು ಹೊಂದಿರುವ ಮಕ್ಕಳನ್ನು ನೋಡಿಕೊಳ್ಳುವವರು ಸ್ವಸ್ಥ ಮನೋಧರ್ಮ ಇರುವ ಮಕ್ಕಳ ಆರೈಕೆ ಮಾಡುವವರಿಗಿಂತ ಸೂಕ್ಷ್ಮವಾಗಿ ಸ್ಪಂದಿಸುವ ಆರೈಕೆಯನ್ನು ಪ್ರದರ್ಶಿಸುವ ಸಾಧ್ಯತೆ ಕಡಿಮೆ ಮತ್ತು ಖಿನ್ನತೆಯ ಲಕ್ಷಣಗಳನ್ನು ವರದಿ ಮಾಡುವ ಸಾಧ್ಯತೆ ಹೆಚ್ಚು. ಮಕ್ಕಳ ಬೆಳವಣಿಗೆಯ ಮೇಲೆ ತಾಯಿಯ ಖಿನ್ನತೆಯ ರೋಗಲಕ್ಷಣಗಳ ಋಣಾತ್ಮಕ ಪರಿಣಾಮಗಳು ಕಷ್ಟಕರ ಸ್ವಭಾವವನ್ನು ಹೊಂದಿರುವ ಮಗುವನ್ನು ಬೆಳೆಸುವಲ್ಲಿ ಉಲ್ಬಣಗೊಳ್ಳುತ್ತವೆ ಮತ್ತು ಕುಟುಂಬಗಳು ಬಡತನದಲ್ಲಿರುವಾಗ ಇದೇ ರೀತಿಯ ಸಂಬಂಧವನ್ನು ಹೊಂದಿರಬಹುದು. ಅದೇ ರೀತಿ, ಕುಟುಂಬ ಹೂಡಿಕೆಯ ಮಾದರಿಯು, ಆರೈಕೆದಾರರು ತಮ್ಮ ಮಕ್ಕಳನ್ನು ಬುದ್ಧಿವಂತರೆಂದು ಅಥವಾ ಶೈಕ್ಷಣಿಕವಾಗಿ ಪ್ರತಿಭಾವಂತರೆಂದು ಗ್ರಹಿಸಿದರೆ, ಬಡತನದ ಸಮಯದಲ್ಲಿಯೂ ಸಹ ಶೈಕ್ಷಣಿಕ ಸಂಪನ್ಮೂಲಗಳಲ್ಲಿ ಹೂಡಿಕೆ ಮಾಡುವ ಸಾಧ್ಯತೆಯಿದೆ ಎಂದು ಊಹಿಸುತ್ತದೆ.




**ಚಿತ್ರ ೪.** ಮಕ್ಕಳ ಮೇಲೆ ಬಡತನದ ಪರಿಣಾಮಗಳ ವಹಿವಾಟಿನ ಮಾದರಿ

ಹೀಗಾಗಿ, ಆರೈಕೆದಾರರು ಬಡತನಕ್ಕೆ ಸಂಬಂಧಿಸಿದ ಒತ್ತಡವನ್ನು ಅನುಭವಿಸಬಹುದು, ಪರಿಣಾಮವಾಗಿ ಮಾನಸಿಕ ಆರೋಗ್ಯ ಸಮಸ್ಯೆಗಳು ಉಂಟಾಗಬಹುದಲ್ಲದೆ, ಇದು ತಮ್ಮ ಮಕ್ಕಳೊಂದಿಗಿನ ಅವರ ಸಂವಹನದ ಗುಣಮಟ್ಟದಲ್ಲಿ ಮಧ್ಯಪ್ರವೇಶಿಸಬಹುದು, ಅವರು ತಮ್ಮ ಮಕ್ಕಳ ಕೌಶಲ್ಯ ಮತ್ತು ನಡವಳಿಕೆಯ ಗ್ರಹಿಕೆಗಳಿಂದ ಪ್ರಭಾವಿತರಾಗುತ್ತಾರೆ. ಅಂತೆಯೇ, ಮಕ್ಕಳು ಅನೇಕ ಪ್ರಕ್ರಿಯೆಗಳಿಂದ ಪ್ರಭಾವಿತರಾಗುತ್ತಾರೆ. ಸಂಪನ್ಮೂಲಗಳ ಕೊರತೆ ಅಥವಾ ಬಡತನಕ್ಕೆ ಸಂಬಂಧಿಸಿದ ಇತರ ಅಪಾಯಕಾರಿ

ಅಂಶಗಳ ನೇರ ಪರಿಣಾಮಗಳ ಜೊತೆಗೆ, ಅಸಮಂಜಸ ಆರೈಕೆ ಅಥವಾ ಕಠಿಣ ಪಾಲನೆ ಸೇರಿದಂತೆ ಆರೈಕೆದಾರ ನಡವಳಿಕೆಯ ಋಣಾತ್ಮಕ ಪರಿಣಾಮಗಳಿವೆ, ಇದು ಮಗುವಿನ ಹೆಚ್ಚು ಅಸ್ತವ್ಯಸ್ತ ನಡವಳಿಕೆಗೆ ಕಾರಣವಾಗುತ್ತದೆ. ಆರೈಕೆದಾರರು ತಮ್ಮ ಮಕ್ಕಳ ಹೆಚ್ಚು ಕಷ್ಟಕರವಾದ ನಡವಳಿಕೆಗಳಿಗೆ ಪ್ರತಿಕ್ರಿಯಿಸುತ್ತಾ ಹೋದಂತೆ ಈ ಚಕ್ರವು ಮುಂದುವರಿಯುತ್ತದೆ.

### ಬಡತನದ ಮೇಲೆ ಸಮುದಾಯದ ಪ್ರಭಾವ

ನೆರೆಹೊರೆ, ಸಮುದಾಯ ಮತ್ತು ಸಾಂಸ್ಕೃತಿಕ ಮಾದರಿಗಳ ಮೇಲೆ ಬಡತನದ ಪರಿಣಾಮಗಳನ್ನು ಕೂಡ ಬೆಳವಣಿಗೆಯ ವ್ಯವಸ್ಥೆಯ ಸಿದ್ಧಾಂತಗಳು (DST) ಎತ್ತಿ ತೋರಿಸುತ್ತದೆ. ಕಡಿಮೆ ಆದಾಯದ ಕುಟುಂಬಗಳು ಆಗಾಗ್ಗೆ ಹೆಚ್ಚಿನ ಸಾಂದ್ರತೆ, ಅಪರಾಧ ಮತ್ತು ಶೈಕ್ಷಣಿಕ ಸಾಮಾಜೀಕರಣಕ್ಕೆ ಕೆಲವೇ ಅವಕಾಶಗಳಿರುವ ಕಡಿಮೆ-ಆದಾಯದ ನೆರೆಹೊರೆಗಳಲ್ಲಿ ವಾಸಿಸಲು ಒಲವು ತೋರುತ್ತವೆ. ಶಾಲೆಗಳು ಸಾಮಾನ್ಯವಾಗಿ ಕಡಿಮೆ ಅನುದಾನವನ್ನು ಪಡೆದಿರುತ್ತವೆ, ಶಿಸ್ತಿನ ಸಮಸ್ಯೆಗಳಿಂದ ಸುತ್ತುವರಿದಿರುತ್ತವೆ, ಸುಸಜ್ಜಿತರಲ್ಲದ ಶಿಕ್ಷಕರು ಮತ್ತು ಅವರ ಶೈಕ್ಷಣಿಕ ಅವಶ್ಯಕತೆಗಳನ್ನು ಪೂರೈಸುವಲ್ಲಿ ತೊಂದರೆಗಳನ್ನು ಎದುರಿಸುತ್ತಿರುತ್ತವೆ. ಮಕ್ಕಳ ಶೈಕ್ಷಣಿಕ ಸಾಧನೆಗಾಗಿ ಸಮುದಾಯ ಮಟ್ಟದ ಚರಾಂಶಗಳ (variables) ಸ್ಪಷ್ಟ ಪ್ರಾಮುಖ್ಯತೆಯ ಹೊರತಾಗಿಯೂ, ಅವುಗಳು ಕೌಟುಂಬಿಕ-ಹಂತದ ಚರಾಂಶಗಳಿಗಿಂತ ಕಡಿಮೆ ವ್ಯತ್ಯಾಸವನ್ನುಂಟುಮಾಡುತ್ತವೆ ಮತ್ತು ಇದು ಕುಟುಂಬದ ಒತ್ತಡದ ಮಾದರಿಯಂತೆ, ಸಮುದಾಯ ಮಟ್ಟದ ಬಡತನದ ಪರಿಣಾಮಗಳನ್ನು ಕುಟುಂಬದ ಮಾದರಿಗಳು ಮತ್ತು ನಡವಳಿಕೆಗಳ ಮೂಲಕ ಮಧ್ಯಸ್ಥಿಕೆ ಮಾಡಬಹುದು ಎಂದು ಸೂಚಿಸುತ್ತದೆ.

ಬಡತನದ ಸಮುದಾಯದಿಂದ ಹೊರಬರುವ ಚಲನೆಯು ಅತ್ಯವಶ್ಯವಾಗಿ ನಿರಂತರ ಬಡತನದ ಋಣಾತ್ಮಕ ಪರಿಣಾಮಗಳ ಕಣ್ಮರೆಗೆ ಕಾರಣವಾಗುವುದಿಲ್ಲ. ಮರುಕಳಿಸುವ ಬಡತನದ ಪರಿಣಾಮವು ಮಕ್ಕಳ ಫಲಿತಾಂಶಗಳ ಮೇಲೆ ನಿರಂತರ ಬಡತನದಂತೆಯೇ ಇರುತ್ತದೆ. ಮರುಕಳಿಸುವ ಮತ್ತು ನಿರಂತರ ಬಡತನದ ಪರಿಣಾಮಗಳ ನಡುವಿನ ವ್ಯತ್ಯಾಸದ ಕೊರತೆಗೆ ಒಂದು ಸಂಭವನೀಯ ವ್ಯಾಖ್ಯಾನವೆಂದರೆ ಆರಂಭಿಕ ಪರಿಣಾಮಗಳ ಮಾದರಿ (Early Effects Model), ಇದು ಶಾಲಾಪೂರ್ವದಲ್ಲಿ ನೆಲೆಗೊಳಿಸಿದ ಕಳಪೆ ನಡವಳಿಕೆ ಮತ್ತು ಶೈಕ್ಷಣಿಕ ಮಾದರಿಗಳು ಪರಿಸರ ಪರಿಸ್ಥಿತಿಗಳನ್ನು ಸುಧಾರಿಸಿದರೂ ಸಹ ಮುಂದುವರಿಯುತ್ತವೆ ಎಂದು ಸೂಚಿಸುತ್ತದೆ. ಉದಾಹರಣೆಗೆ, ಶಾಲಾ ಪ್ರವೇಶವಾಗುವಾಗ ಇರುವ ಶಾಲಾ ಸಿದ್ಧತೆಯಲ್ಲಿನ ವ್ಯತ್ಯಾಸಗಳು ಶಾಲಾ ಸಾಧನೆಯೊಂದಿಗೆ ದೀರ್ಘಾವಧಿಯ ಮಹತ್ವದ ಸಂಬಂಧಗಳನ್ನು ಹೊಂದಿವೆ, ಇದರ ಪರಿಣಾಮವಾಗಿ ಯುನೈಟೆಡ್ ಸ್ಟೇಟ್ಸ್‌ನಲ್ಲಿ ಕಾಲಾನಂತರದಲ್ಲಿ ಅಸಮಾನತೆಗಳು ಹೆಚ್ಚಾಗುತ್ತವೆ, ಕುಟುಂಬವು ಬಡತನದಿಂದ ಪಾರಾಗಿದ್ದರೂ ಸಹ ಉಳಿಯಬಹುದಾದ ಅಂತರವನ್ನು ಸೃಷ್ಟಿಸುತ್ತವೆ.

### ಮಕ್ಕಳ ಬೆಳವಣಿಗೆ ಮತ್ತು ಶೈಕ್ಷಣಿಕ ಫಲಿತಾಂಶಗಳನ್ನು ಸುಧಾರಿಸಲು ಮಧ್ಯಸ್ಥಿಕೆಗಳು

ಕಳೆದ ನಾಲ್ಕು ದಶಕಗಳಲ್ಲಿ, ಶಾಲಾ ಸಿದ್ಧತೆ ಮತ್ತು ಮಕ್ಕಳ ಬೆಳವಣಿಗೆಯನ್ನು ಸುಧಾರಿಸುವುದು ಬಡತನ-ಸಂಬಂಧಿತ ಅಸಮಾನತೆಗಳನ್ನು ಕಡಿಮೆ ಮಾಡುತ್ತದೆ ಎಂಬುದಕ್ಕೆ ಮನವೊಪ್ಪಿಸುವ ಪುರಾವೆಗಳಿವೆ. ಬಡತನ ಮತ್ತು ಮಕ್ಕಳ ಬೆಳವಣಿಗೆಯನ್ನು ಸಂಬಂಧಿಸುವ ಮೇಲೆ ಹೇಳಿರುವ ಮಾದರಿಗಳಿಗನುಗುಣವಾಗಿ ನಮ್ಮ ಚರ್ಚೆಯು ಶಾಲಾ ಸಿದ್ಧತೆ ಅಥವಾ ಶಾಲಾ ಶಿಕ್ಷಣಕ್ಕಾಗಿ ಕುಟುಂಬದ ಬೆಂಬಲಗಳನ್ನು ಸುಧಾರಿಸಲು ನಿರ್ದಿಷ್ಟವಾಗಿ ಪ್ರಯತ್ನಿಸುವ ಮಧ್ಯಸ್ಥಿಕೆಗಳ ಮೇಲೆ ಗಮನಹರಿಸುತ್ತದೆ. ಇವುಗಳಲ್ಲಿ ಕುಟುಂಬ ಆಧಾರಿತ ಸುರಕ್ಷತಾ ಜಾಲದ ಕಾರ್ಯಕ್ರಮಗಳು, ಶಾಲಾಪೂರ್ವ ಮಧ್ಯಸ್ಥಿಕೆಗಳು, ಆರಂಭಿಕ ಕಲಿಕೆಯನ್ನು ಬೆಂಬಲಿಸುವ ಪೋಷಕರ ಸಾಮರ್ಥ್ಯವನ್ನು ಸುಧಾರಿಸುವ ಕಾರ್ಯಕ್ರಮಗಳು ಮತ್ತು ಶಾಲಾ ಪ್ರವೇಶದ ಮೊದಲು ಮಕ್ಕಳ ಬೆಳವಣಿಗೆಯನ್ನು ಸುಧಾರಿಸುವ ಸಮಗ್ರ ಕಾರ್ಯಕ್ರಮಗಳು ಸೇರಿವೆ. ಪ್ರತಿ ಸಂದರ್ಭದಲ್ಲಿ, ಯುನೈಟೆಡ್ ಸ್ಟೇಟ್ಸ್ ಮತ್ತು ಅಭಿವೃದ್ಧಿಶೀಲ ರಾಷ್ಟ್ರಗಳಿಂದ ಉದಾಹರಣೆಗಳನ್ನು ಒದಗಿಸಲಾಗುತ್ತದೆ.

### ಕುಟುಂಬದ ಬಡತನವನ್ನು ಕಡಿಮೆ ಮಾಡುವುದು

### ಯುಎಸ್‌ಎ

ಮಕ್ಕಳ ಶೈಕ್ಷಣಿಕ ಸಾಧನೆಯ ಮೇಲೆ ಬಡತನವನ್ನು ಕಡಿಮೆ ಮಾಡುವುದರ ಪರಿಣಾಮಗಳನ್ನು ಪರೀಕ್ಷಿಸಲು ಹಲವಾರು ದೊಡ್ಡ ಮಟ್ಟದ (macro level) ಮಧ್ಯಸ್ಥಿಕೆಗಳನ್ನು ಮೌಲ್ಯಮಾಪನ ಮಾಡಲಾಗಿದೆ. ಆದಾಯ ಪೂರಕ (ssupplementation) ಮತ್ತು ವಸತಿ ಸ್ಥಳಾಂತರ ಕಾರ್ಯಕ್ರಮಗಳಿಂದ ಆರಂಭಿಕ ಫಲಿತಾಂಶಗಳು ಭರವಸೆದಾಯಕವಾಗಿ ಕಾಣಿಸಿದವು. ಆದಾಗ್ಯೂ, ನ್ಯೂಯಾರ್ಕ್‌ನಲ್ಲಿನ ತುಲನಾತ್ಮಕವಾಗಿ ದೊಡ್ಡದಾದ ವಸತಿ ಸ್ಥಳಾಂತರ ಕಾರ್ಯಕ್ರಮದ ದೀರ್ಘಾವಧಿಯ ಮೌಲ್ಯಮಾಪನಗಳು ಹೆಚ್ಚಿನ-ಬಡತನದಿಂದ ಕಡಿಮೆ-ಬಡತನದ ನೆರೆಹೊರೆಗಳಿಗೆ ಮಕ್ಕಳನ್ನು ಚಲಿಸುವುದರಿಂದ ಕಡಿಮೆ-ಆದಾಯದ ಮಕ್ಕಳ ಶೈಕ್ಷಣಿಕ ಕಾರ್ಯಕ್ಷಮತೆಯ ಮೇಲೆ ಉಂಟಾಗುವ ಪರಿಣಾಮಗಳ ಸಂಕೀರ್ಣತೆ ಮತ್ತು ವ್ಯತ್ಯಾಸವನ್ನು ವಿವರಿಸುತ್ತವೆ. ಈ ಯೋಜನೆಯಲ್ಲಿ, ಕಡಿಮೆ-ಆದಾಯದ ಮಕ್ಕಳು ಮತ್ತು ಕುಟುಂಬಗಳ ಒಂದು ಗುಂಪು ಹೆಚ್ಚಿನ-ಬಡತನದಿಂದ ಕಡಿಮೆ-ಬಡತನದ ನೆರೆಹೊರೆಗಳಿಗೆ ತೆರಳಲು ವೋಚರ್‌ಗಳನ್ನು ಪಡೆದುಕೊಂಡಿತು. ಆರಂಭಿಕ ಮೌಲ್ಯಮಾಪನವು (ಎರಡೂವರೆ ವರ್ಷಗಳ ನಂತರ) ಕಡಿಮೆ-ಬಡತನದ ನೆರೆಹೊರೆಗಳಿಗೆ ಸ್ಥಳಾಂತರಗೊಂಡ ಹದಿಹರೆಯದ ಹುಡುಗರು ಹೆಚ್ಚಿನ ಬಡತನದ ನೆರೆಹೊರೆಯಲ್ಲಿ ಉಳಿದಿರುವ ಹುಡುಗರಿಗಿಂತ ಉತ್ತಮ ಓದುವಿಕೆ ಮತ್ತು ಗಣಿತದ ಅಂಕಗಳನ್ನು ಹೊಂದಿದ್ದಾರೆ ಎಂದು ಸೂಚಿಸಿತು. ಹುಡುಗಿಯರಿಗೆ ಯಾವುದೇ ವ್ಯತ್ಯಾಸವಿರಲಿಲ್ಲ. ಆದಾಗ್ಯೂ, 5 ವರ್ಷಗಳ ಮೌಲ್ಯಮಾಪನದಲ್ಲಿ, ಆರಂಭಿಕ ಪ್ರಯೋಜನಗಳು ಉಳಿದಿರಲಿಲ್ಲ. ಬದಲಿಗೆ, ಫಲಿತಾಂಶಗಳು ಹಿಮ್ಮುಖವಾಗಿತ್ತು. ಕಡಿಮೆ-ಬಡತನದ ನೆರೆಹೊರೆಯಲ್ಲಿರುವ ಯುವಜನರು (ಎರಡೂ ಲಿಂಗಗಳು) ಹೆಚ್ಚಿನ ಬಡತನದ ನೆರೆಹೊರೆಯಲ್ಲಿ ಉಳಿದಿರುವ ಮಕ್ಕಳಿಗಿಂತ ಕಡಿಮೆ ಸಾಧನೆ ಅಂಕಗಳನ್ನು ಹೊಂದಿದ್ದರು. ಪರಿಣಾಮಗಳ ಕೊರತೆಗೆ ಹಲವಾರು ಸಂಭಾವ್ಯ ವಿವರಣೆಗಳಿವೆ, ಅವುಗಳೆಂದರೆ, ಭೇದಾತ್ಮಕ ಲಕ್ಷಣದ ಮಾದರಿಗಳು (differential attribution patterns), ಅಡಚಣೆಗಳು ಮತ್ತು ಒತ್ತಡ, ನೆರೆಹೊರೆಯ ಗುಣಮಟ್ಟದಲ್ಲಿನ ಬದಲಾವಣೆಗಳ ಹೊರತಾಗಿಯೂ ಕುಟುಂಬದ ಬಡತನದ ನಿರಂತರತೆ ಮತ್ತು ಹೆಚ್ಚಿನ ಬಡತನದ ನೆರೆಹೊರೆಗೆ ಮತ್ತೆ ವಲಸೆ ಹೋಗುವುದು. ಕಡಿಮೆ-ಬಡತನದ ನೆರೆಹೊರೆಗೆ ಸ್ಥಳಾಂತರಿಸುವುದರೊಂದಿಗೆ ಕುಟುಂಬದ ಆಥಿಕತೆಯಲ್ಲಿ ಯಾವುದೇ ಬದಲಾವಣೆ ಕಂಡುಬಂದಿಲ್ಲ. ಈ ಕಾಣ್ಕೆಗಳು (findings) ನೆರೆಹೊರೆ ಮತ್ತು ಶಾಲೆಯ ಗುಣಮಟ್ಟದಂತಹ ಸನ್ನಿವೇಶಾನುಸಾರವಾದ ಚರಾಂಶಗಳನ್ನು ಬದಲಾಯಿಸಲು ಪ್ರಯತ್ನಿಸುವುದರಲ್ಲಿನ ಸಂಕೀರ್ಣತೆಯನ್ನು ವಿವರಿಸುತ್ತವೆ ಮತ್ತು ಶಾಲಾ-ವಯಸ್ಸಿನ ಮಕ್ಕಳು ಮತ್ತು ಕುಟುಂಬಗಳು ಸುಲಭವಾಗಿ ಬದಲಾಯಿಸಲು ಅನುಕೂಲಕರವಾಗದಂತಹ ವರ್ತನೆಯ ಅಥವಾ ಕಲಿಕೆಯ ಮಾದರಿಗಳನ್ನು ಸ್ಥಿತಗೊಳಿಸಿರಬಹುದು ಎಂದು ಸೂಚಿಸುತ್ತವೆ.

### ಅಭಿವೃದ್ಧಿಶೀಲ ರಾಷ್ಟ್ರಗಳು

ಯುನೈಟೆಡ್ ಸ್ಟೇಟ್ಸ್‌ನಂತೆಯೇ, ಅಭಿವೃದ್ಧಿಶೀಲ ರಾಷ್ಟ್ರಗಳ ದತ್ತಾಂಶವು ಅನೇಕ ಕುಟುಂಬಗಳು ಮರುಕಳಿಸುವ ಬಡತನವನ್ನು, ಶೇಕಡಾವಾರು ಕಡಿಮೆ ಕುಟುಂಬಗಳು ನಿರಂತರ ಬಡತನವನ್ನು ಅನುಭವಿಸುತ್ತಿರುವುದನ್ನು ಸೂಚಿಸುತ್ತದೆ. ಯುನೈಟೆಡ್ ಸ್ಟೇಟ್ಸ್‌ನಲ್ಲಿರುವಂತೆ, ಕುಟುಂಬವು ನಂತರದ ಜೀವನದಲ್ಲಿ ತನ್ನ ಯೋಗಕ್ಷೇಮವನ್ನು ಸುಧಾರಿಸಿದರೂ ಸಹ ಬಡತನದ ಆರಂಭಿಕ ಅನುಭವಗಳು ದೀರ್ಘಕಾಲೀನ ಪರಿಣಾಮಗಳನ್ನು ಬೀರುವ ಸಾಧ್ಯತೆಯಿದೆ, ಆದರೆ ದತ್ತಾಂಶಗಳು ಲಭ್ಯವಿಲ್ಲ. ಬಡತನದಲ್ಲಿನ ಬದಲಾವಣೆಗಳ ದೀರ್ಘಾವಧಿಯ ಅಧ್ಯಯನಗಳು ಕುಟುಂಬಗಳನ್ನು ಬಡತನದಿಂದ ಹೊರತರುವ ಅಂಶಗಳು ಬಡತನಕ್ಕೆ ಕಾರಣವಾಗುವ ಅಂಶಗಳಿಂದ ಭಿನ್ನವಾಗಿರಬಹುದು ಎಂದು ಸೂಚಿಸುತ್ತವೆ. ಅನೇಕ ದೇಶಗಳಲ್ಲಿ ಬಡತನಕ್ಕೆ ಇಳಿಯಲು ಅನಾರೋಗ್ಯ ಮತ್ತು ಆರೋಗ್ಯದ ವೆಚ್ಚಗಳು ಸಾಮಾನ್ಯ ಕಾರಣಗಳಲ್ಲಿ ಒಂದಾಗಿದೆ. ಸಂಚಿತ ಒತ್ತಡದ ಮಾದರಿಗೆ (cumulative stress model) ಅನುಗುಣವಾಗಿ, ಒಂದು ಋಣಾತ್ಮಕ ಅನುಭವವು ಸಾಮಾನ್ಯವಾಗಿ ಕುಟುಂಬವನ್ನು ಬಡತನದಲ್ಲಿ ಮುಳುಗಿಸುವುದಿಲ್ಲ, ಆದರೆ ಹಲವಾರು ಸತತ "ಹೊಡೆತಗಳು" ವ್ಯತ್ಯಾಸವನ್ನು ಮಾಡಬಹುದು.

ಕುಟುಂಬಗಳು ಬಡತನದಿಂದ ಹೊರಬರಲು ಸಹಾಯ ಮಾಡುವ ಅಂಶಗಳ ಬಗ್ಗೆ ಹೆಚ್ಚಿನ ಅರಿವಿಲ್ಲ. ಬಡತನದಲ್ಲಿರುವ ಕುಟುಂಬಗಳು ಸಾಮಾನ್ಯವಾಗಿ ನಿಷ್ಕ್ರಿಯರಾಗಿ ಬೆಳವಣಿಗೆ ಅಥವಾ ಕಾರ್ಯಕ್ರಮದ ಪ್ರಯೋಜನಗಳು ತಮ್ಮ ದಾರಿಯಲ್ಲಿ ಬರಲು ಕಾಯುತ್ತಾ ಕುಳಿತುಕೊಳ್ಳುವುದಿಲ್ಲ; ಬದಲಿಗೆ, ಅವರು ಉತ್ತಮ ಸಮಯದವರೆಗೆ ಅವರ ಕಷ್ಟದ ಸಂದರ್ಭಗಳನ್ನು ನಿಭಾಯಿಸಲು ತಂತ್ರಗಳನ್ನು ಅಳವಡಿಸಿಕೊಳ್ಳುತ್ತಾರೆ. ವಿಶ್ವಬ್ಯಾಂಕ್‌ನ ಬಡತನದಿಂದ ಹೊರಬರುವ ಪ್ರಕರಣದ ಅಧ್ಯಯನಗಳ ಆರಂಭಿಕ ವಿಶ್ಲೇಷಣೆಯಿಂದ, ಬಡತನದಿಂದ ಹೊರಬರುವ ಪ್ರಕ್ರಿಯೆಯು ಹೆಚ್ಚುತ್ತಿರುವ ಆದಾಯಗಳ ವೈವಿಧ್ಯತೆ, ವಲಸೆ, ಸುಧಾರಿತ

ಸುರಕ್ಷತಾ ಜಾಲಗಳು ಮತ್ತು ಅನೌಪಚಾರಿಕ ಮತ್ತು ಔಪಚಾರಿಕ ಕೆಲಸಗಾರರಿಗೆ ಸೇವೆಗಳು ಮತ್ತು ಹೆಚ್ಚಿದ ಅವಕಾಶಗಳು ಮತ್ತು ಆರ್ಥಿಕ ಬೆಳವಣಿಗೆಯೊಂದಿಗೆ ಹೊಂದಿಕೆಯಾದ ಶಿಕ್ಷಣಗಳೊಡನೆ ಸಂಬಂಧ ಹೊಂದಿದೆ ಎಂದು ತಿಳಿದು ಬರುತ್ತದೆ. ಉದ್ಯೋಗಗಳು ಅಥವಾ ಔಪಚಾರಿಕ ಕಾರ್ಯಕ್ರಮಗಳ ಲಭ್ಯತೆಯಿಂದಾಗಿ ಕೆಲವು ಕುಟುಂಬಗಳು ಬಡತನದಿಂದ ಹೊರಬಂದರೂ, ಅದರ ಶೇಕಡಾವಾರು ಚಿಕ್ಕದಾಗಿದೆ, ಇದು ವಿಸ್ತೃತ ಗಮನವನ್ನು ಕೇಂದ್ರೀಕರಿಸಿದ ಆರ್ಥಿಕ ಕಾರ್ಯಕ್ರಮಗಳು ಅಥವಾ ಖಾಸಗಿ ವಲಯದ ವ್ಯಾಪಾರ ವ್ಯವಹಾರದ ಹೆಚ್ಚಳವು ಬಡತನದಿಂದ ಪಾರಾಗುವುದರ ಮೇಲೆ ತುಲನಾತ್ಮಕವಾಗಿ ಸಣ್ಣ ಪರಿಣಾಮಗಳನ್ನು ಬೀರುತ್ತದೆ ಎಂಬ ತೀರ್ಮಾನಕ್ಕೆ ಕಾರಣವಾಯಿತು. ಸಾಮಾನ್ಯವಾಗಿ ಈ ಕಾರ್ಯಕ್ರಮಗಳು ಅಸಮಾನತೆಗಳ ವೃದ್ಧಿಗೆ ಕಾರಣವಾಗುತ್ತವೆ ಏಕೆಂದರೆ ಇವುಗಳಿಂದ ಶ್ರೀಮಂತ ಕುಟುಂಬಗಳು ಬಡ ಕುಟುಂಬಗಳಿಗಿಂತ ಹೆಚ್ಚಿನ ಲಾಭ ಪಡೆಯಲು ಸಾಧ್ಯವಾಗುತ್ತದೆ.

ಶೈಕ್ಷಣಿಕ ಫಲಿತಾಂಶಗಳ ಮೇಲೆ ನಿರ್ದಿಷ್ಟ ಪ್ರಭಾವ ಬೀರಲು ರೂಪಿಸಲಾದ ಬಡತನ ಕಡಿಮೆಗೊಳಿಸುವ ಹೊಸ ಮಧ್ಯಸ್ಥಿಕೆಯು ಷರತ್ತುಬದ್ಧ ನಗದು ವರ್ಗಾವಣೆ ಕಾರ್ಯಕ್ರಮಗಳಾಗಿದ್ದು, ಕೆಲವು ಷರತ್ತುಗಳನ್ನು ಪೂರೈಸಲು ಸಾಧ್ಯವಾದರೆ (ಸಾಮಾನ್ಯವಾಗಿ ಮಕ್ಕಳನ್ನು ಶಾಲೆಗೆ ಕಳುಹಿಸುವುದು ಮತ್ತು ಮಕ್ಕಳು ಕನಿಷ್ಟ ಪೋಷಣೆ ಮತ್ತು ಪ್ರತಿರಕ್ಷಣೆಗಳನ್ನು ಪಡೆಯುತ್ತಾರೆ ಎಂದು ಖಚಿತಪಡಿಸಿಕೊಳ್ಳುವುದು) ಪ್ರತಿ ತಿಂಗಳು ಮನೆಯ ಮಹಿಳೆಯರಿಗೆ ಸಣ್ಣ ಪ್ರಮಾಣದ ಹಣವನ್ನು ನೀಡುತ್ತದೆ. ಮೆಕ್ಸಿಕೋ, ಹೊಂಡುರಾಸ್ ಮತ್ತು ನಿಕರಾಗುವಾದಲ್ಲಿನ ಮೌಲ್ಯಮಾಪನಗಳು ಈ ಕಾರ್ಯಕ್ರಮಗಳ ಪರಿಣಾಮವಾಗಿ ಮಕ್ಕಳ ಪೌಷ್ಟಿಕಾಂಶದ ಸ್ಥಿತಿಯಲ್ಲಿ ಗಮನಾರ್ಹ ಸುಧಾರಣೆಗಳನ್ನು ತೋರಿಸಿವೆ, ಇದು ವಿಶೇಷವಾಗಿ ಹುಡುಗಿಯರ ಶಾಲಾ ಸಿದ್ಧತೆ ಮತ್ತು ಶಾಲಾ ಹಾಜರಾತಿಯನ್ನು ಸುಧಾರಿಸತಕ್ಕದ್ದು.

**ಶಾಲಾ ಸಿದ್ಧತೆಯನ್ನು ಸುಧಾರಿಸುವುದು: ಉನ್ನತ ಗುಣಮಟ್ಟದ ಶಾಲಾಪೂರ್ವ ಕಾರ್ಯಕ್ರಮಗಳ ಪರಿಣಾಮ**

**ಯುಎಸ್ಎ**

ಅಭಿವೃದ್ಧಿ ಹೊಂದಿದ ದೇಶಗಳಲ್ಲಿ, ಪೋಷಕರ ಒಳಗೊಳ್ಳುವಿಕೆ ಮತ್ತು ಆರೋಗ್ಯ ಸ್ಥಿತಿಯ ಸುಧಾರಣೆಯೊಂದಿಗೆ ಹೆಚ್ಚಿನ ಗುಣಮಟ್ಟದ ಶಾಲಾಪೂರ್ವ ಅನುಭವಗಳನ್ನು ಒದಗಿಸುವುದು, 5 ವರ್ಷದ ಹೊತ್ತಿಗೆ ಮಕ್ಕಳ ಭಾಷೆ ಮತ್ತು ಅರಿವಿನ ಕೌಶಲ್ಯಗಳ ಮೇಲೆ ಗಮನಾರ್ಹ ಪರಿಣಾಮಗಳನ್ನು ಬೀರುತ್ತದೆ ಎಂದು ಹೆಚ್ಚುತ್ತಿರುವ ಸಾಕ್ಷ್ಯಾಧಾರಗಳು ಸೂಚಿಸುತ್ತವೆ. ಪ್ರತಿಕೂಲ ಸ್ಥಿತಿಯಲ್ಲಿರುವ ಮಕ್ಕಳೊಂದಿಗೆ ನಡೆಸಿದ ತೀವ್ರವಾದ ಆರಂಭಿಕ ಮಧ್ಯಸ್ಥಿಕೆಯ ವರದಿಗಳು ಪೆರ್ರಿ ಪ್ರಿಸ್ಕೂಲ್ ಪ್ರಾಜೆಕ್ಟ್, ಅಬೆಸೆಡಿಯರಿಯನ್ ಪ್ರಾಜೆಕ್ಟ್, ಮತ್ತು ಚಿಕಾಗೋ ಚೈಲ್ಡ್-ಪೇರೆಂಟ್ ಸೆಂಟರ್‌ಗಳಿಗೆ 0.5–0.75ರಷ್ಟು ಪ್ರಮಾಣದ ಪರಿಣಾಮಗಳನ್ನು ತೋರಿಸಿವೆ.

ಪೆರ್ರಿ ಪ್ರಿಸ್ಕೂಲ್ ಪ್ರೋಗ್ರಾಂ ಮತ್ತು ಅಬೆಸೆಡೆರಿಯನ್ ಪ್ರಯೋಗಗಳು ಕಡಿಮೆ-ಆದಾಯದ ಮಕ್ಕಳನ್ನು ಗುರಿಯಾಗಿಸಿಕೊಂಡ ಆರಂಭಿಕ ಶೈಕ್ಷಣಿಕ ಕಾರ್ಯಕ್ರಮಗಳ ಯಾದೃಚ್ಛಿಕ ನಿಯಂತ್ರಿತ ಪ್ರಯೋಗಗಳಾಗಿವೆ (randomized controlled trials) ಮತ್ತು ಔಪಚಾರಿಕ ಶಾಲಾ ವರ್ಷಗಳನ್ನು ಮೀರಿ ಪ್ರೌಢಾವಸ್ಥೆಗೆ ವಿಸ್ತರಿಸಿದ ಪ್ರಯೋಜನಗಳನ್ನು ತೋರಿಸಿವೆ. ಪೆರ್ರಿ ಕಾರ್ಯಕ್ರಮವು ಮಕ್ಕಳು 3 ಮತ್ತು 4 ವರ್ಷ ವಯಸ್ಸಿನವರಾಗಿದ್ದಾಗ ಪ್ರಾರಂಭವಾಯಿತು ಮತ್ತು ಬಡತನದಲ್ಲಿರುವ ಮಕ್ಕಳಿಗೆ ತೀವ್ರವಾದ ಶಾಲಾಪೂರ್ವ ಶಿಕ್ಷಣ ಮತ್ತು ಮನೆ ಭೇಟಿಗಳನ್ನು ಒದಗಿಸಿತು. ಅಬೆಸೆಡೆರಿಯನ್ ಯೋಜನೆಯು ಜೀವನದ ಮೊದಲ ವರ್ಷದಲ್ಲಿ ಪ್ರಾರಂಭವಾಯಿತು ಮತ್ತು ಬಡ ಮತ್ತು ಪ್ರಾಥಮಿಕವಾಗಿ ಆಫ್ರಿಕನ್ ಅಮೆಕನ್ ತಾಯಂದಿರು ಮತ್ತು ಮಕ್ಕಳಿಗೆ 5 ವರ್ಷಗಳವರೆಗೆ ತೀವ್ರವಾದ ಸೇವೆಗಳನ್ನು ಒದಗಿಸಿತು. ಎರಡೂ ತೀವ್ರ, ಉತ್ತಮ ಗುಣಮಟ್ಟದ ಪರಿಣಾಮಕಾರಿತ್ವವನ್ನು (efficacy) ಹೊಂದಿದ್ದ ಅಧ್ಯಯನಗಳು.

ಚಿಕಾಗೋದಲ್ಲಿನ ಮಕ್ಕಳ-ಪೋಷಕ (child-parent) ಕೇಂದ್ರದ ಕಾರ್ಯಕ್ರಮವು 1500 ಕಡಿಮೆ-ಆದಾಯದ ಮಕ್ಕಳನ್ನು ದಾಖಲಿಸಿಕೊಂಡು ಮುಂದುವರಿಯುತ್ತಿರುವ ಕಾರ್ಯಕ್ರಮವಾಗಿ ಶಿಶುವಿಹಾರದಿಂದ ಮೂರನೇ ತರಗತಿಯವರೆಗೆ ಸಮಗ್ರ ಸೇವೆಗಳನ್ನು ಒದಗಿಸಿತು. ದೀರ್ಘಾವಧಿಯ ಅನುಸರಣೆಯು ಮಧ್ಯಸ್ಥಿಕೆಯಲ್ಲಿ ಮಕ್ಕಳು ಪ್ರೌಢಶಾಲೆಯಿಂದ ಪದವೀಧರರಾಗುವ, ಕಾಲೇಜಿಗೆ ಹಾಜರಾಗುವ, ಪೂರ್ಣಾವಧಿಯ ಉದ್ಯೋಗವನ್ನು ಹೊಂದುವ ಮತ್ತು ಆರೋಗ್ಯ ವಿಮೆಗೆ ದಾಖಲಾಗುವ ಸಾಧ್ಯತೆ ಹೆಚ್ಚು, ಮತ್ತು ಅಪರಾಧದ ನಿಟ್ಟಿನ ಬಂಧನಗಳು, ಅಪರಾಧ ಸಿದ್ಧಿ, ಅಪರಾಧಗಳು, ಬಂಧನಗಳು ಅಥವಾ ಖಿನ್ನತೆಯ ಲಕ್ಷಣಗಳನ್ನು ಹೊಂದಿರುವ ಸಾಧ್ಯತೆ ಕಡಿಮೆ ಎಂದು ತೋರಿಸಿದೆ. ಈ ಸಂಶೋಧನೆಗಳು

ಪ್ರಭಾವಶಾಲಿಯಾಗಿದ್ದರೂ, ಕೆಲವು ಎಚ್ಚರಿಕೆಗಳು ಅವಶ್ಯಕ. ಏಕೆಂದರೆ, ಮಕ್ಕಳನ್ನು ಯಾದೃಚ್ಛಿಕವಾಗಿ ಮಧ್ಯಸ್ಥಿಕೆಯ ಕಾರ್ಯಕ್ರಮಕ್ಕೆ ನಿಯೋಜಿಸದ ಕಾರಣ, ಆಯ್ಕೆ ಪಕ್ಷಪಾತದ ಸಾಧ್ಯತೆಯು ಉದ್ಭವಿಸುತ್ತದೆ. ಆದಾಗ್ಯೂ, ಇತರ ರಾಜ್ಯ-ಅನುದಾನಿತ ಮತ್ತು ಗುಣಮಟ್ಟದ ಶಿಶುಪಾಲನಾ ಕಾರ್ಯಕ್ರಮಗಳಿಗೆ ಧನಾತ್ಮಕ ಪರಿಣಾಮಗಳು ಕಂಡುಬಂದಿವೆ, ಆದರೆ ಪರಿಣಾಮದ ಪ್ರಮಾಣಗಳು ಪರಿಣಾಮಕಾರಿತ್ವದ ಪ್ರಯೋಗಗಳಿಗಿಂತ ಕಡಿಮೆಯಾಗಿದೆ.

ನೊಬೆಲ್ ಪ್ರಶಸ್ತಿ ವಿಜೇತ ಜೇಮ್ಸ್ ಹೆಕ್‌ಮ್ಯಾನ್‌ರಂತಹ68 ಅರ್ಥಶಾಸ್ತ್ರಜ್ಞರು ಮಕ್ಕಳು ಮತ್ತು ಸಮಾಜಕ್ಕೆ ಆರಂಭಿಕ ಶಿಕ್ಷಣದಲ್ಲಿ ಹೂಡಿಕೆ ಮಾಡುವ ಪ್ರಯೋಜನಗಳನ್ನು ಗುರುತಿಸಿದರೂ, ಆರಂಭಿಕ ಶಿಕ್ಷಣವು ಸರಕಾರದ ಹೆಚ್ಚಿನ ಬೆಂಬಲವನ್ನು ಪಡೆದಿರುವುದಿಲ್ಲ. ಇತ್ತೀಚಿನ ಅಂದಾಜಿನ ಪ್ರಕಾರ ಪ್ರೀಕಿಂಡರ್‌ಗಾರ್ಟನ್(ಶಿಶುವಿಹಾರಪೂರ್ವ)ಗೆ ಹೋಲಿಸಿದರೆ K–12ರ ನಿಟ್ಟಿನ ತಲಾ ವೆಚ್ಚದಲ್ಲಿನ ವ್ಯತ್ಯಾಸಗಳು ಸುಮಾರು ಏಳು ಪಟ್ಟು ಹೆಚ್ಚು. ಶಾಲಾ ಸಿದ್ಧತೆಯನ್ನು ಖಚಿತಪಡಿಸಿಕೊಳ್ಳಲು ಶಾಲಾಪೂರ್ವ ಕಾರ್ಯಕ್ರಮಗಳನ್ನು ಅಭಿವೃದ್ಧಿಪಡಿಸುವುದರ ಮೇಲೆ ಗಮನವನ್ನು ಕೇಂದ್ರೀಕರಿಸುವ ಬದಲು, ಈಗಾಗಲೇ ಶಾಲೆಗೆ ದಾಖಲಾದ ಮಕ್ಕಳ ನಡುವಿನ ಅಸಮಾನತೆಗಳನ್ನು ಕಡಿಮೆ ಮಾಡಲು ಶೈಕ್ಷಣಿಕ ವ್ಯವಸ್ಥೆಗಳು ತಮ್ಮ ಸಂಪನ್ಮೂಲಗಳನ್ನು ನಿರ್ದೇಶಿಸುತ್ತವೆ. ಆದರೂ ಓದುವಿಕೆ, ಗಣಿತ ಮತ್ತು ಅವಧಾನಗಳಂತಹ ಶಾಲಾ ಪ್ರವೇಶದ ಕೌಶಲ್ಯಗಳು ನಂತರದ ಶೈಕ್ಷಣಿಕ ಯಶಸ್ಸನ್ನು ಮುನ್ಸೂಚಿಸುತ್ತದೆ, ಇದು ಶಾಲಾ ಪ್ರವೇಶಕ್ಕೆ ಮುಂಚಿತವಾಗಿ ಓದುವಿಕೆ, ಗಣಿತ ಮತ್ತು ಅವಧಾನದ ಕೌಶಲ್ಯಗಳಲ್ಲಿ ಶಾಲೆಯ ಸಿದ್ಧತೆಯನ್ನು ಖಚಿತಪಡಿಸಿಕೊಳ್ಳಲು ಹೂಡಿಕೆಗಳ ಮಹತ್ತ್ವವನ್ನು ಸೂಚಿಸುತ್ತದೆ.

## ಅಭಿವೃದ್ಧಿಶೀಲ ರಾಷ್ಟ್ರಗಳು

ಪೂರ್ವ ಪ್ರಾಥಮಿಕ ಶಿಕ್ಷಣ ಕಡ್ಡಾಯವಾಗಿರುವ ಅಭಿವೃದ್ಧಿ ಹೊಂದಿದ ಮತ್ತು ಅಭಿವೃದ್ಧಿ ಹೊಂದುತ್ತಿರುವ 30 ದೇಶಗಳ ಪೈಕಿ 20 ದೇಶಗಳಲ್ಲಿ ಮಕ್ಕಳು ತುಲನಾತ್ಮಕವಾಗಿ ಹೆಚ್ಚಿನ ವಯಸ್ಸಿನಲ್ಲಿ, ಅಂದರೆ, 5 ಅಥವಾ 6ನೇ ವಯಸ್ಸಿನಲ್ಲಿ ಶಾಲೆ ಪ್ರವೇಶಿಸಬೇಕಾಗುತ್ತದೆ, ಆದರೆ 30 ದೇಶಗಳಲ್ಲಿನ 10 ದೇಶಗಳಲ್ಲಿ ಅವರು 5 ವರ್ಷಕ್ಕಿಂತ ಮುಂಚಿತವಾಗಿ ಪ್ರವೇಶಿಸುವುದನ್ನು ನಿರೀಕ್ಷಿಸಲಾಗುತ್ತದೆ. ವಿಶ್ವಾದ್ಯಂತ ಪೂರ್ವ ಪ್ರಾಥಮಿಕ ಶಿಕ್ಷಣಕ್ಕೆ ದಾಖಲಾದ ಮಕ್ಕಳ ಸಂಖ್ಯೆಯು 1975ರಿಂದ ಮೂರು ಪಟ್ಟು ಹೆಚ್ಚಾಗಿದೆ, ಒಟ್ಟಾರೆ 35%ಕ್ಕೆ ತಲುಪಿದೆ. ಸುಮಾರು 75% ಮಕ್ಕಳು ಕೈಗಾರಿಕೀಕರಣಗೊಂಡ ಮತ್ತು ಪರಿವರ್ತನೆಯ ದೇಶಗಳಲ್ಲಿ ಮತ್ತು 32% ಮಕ್ಕಳು ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಕೆಲವು ರೀತಿಯ ಶಾಲಾಪೂರ್ವ ಶಿಕ್ಷಣಕ್ಕೆ ಹಾಜರಾಗುತ್ತಿದ್ದಾರೆ. ಇವುಗಳಲ್ಲಿ ಹೆಚ್ಚಿನ ಕಾರ್ಯಕ್ರಮಗಳು ಪೋಷಕರನ್ನು ಒಳಗೊಳ್ಳಲು ಪ್ರಾರಂಭಿಸಿವೆ, ಮತ್ತು ಕೆಲವು ಪೋಷಣೆ ಮತ್ತು ಆರೋಗ್ಯ ಸೇವೆಗಳನ್ನು ಸಂಯೋಜಿಸುತ್ತವೆ.

1992ರಲ್ಲಿ ವರದಿಯಾದ ಆರಂಭಿಕ ಮಕ್ಕಳ ಬೆಳವಣಿಗೆಯ ಕಾರ್ಯಕ್ರಮಗಳ ಪರಿಣಾಮಗಳ ವಿಮರ್ಶೆಯಲ್ಲಿ ಹಲವಾರು ಕಾರ್ಯಕ್ರಮಗಳು ಪರಿಣಾಮಕಾರಿ ಎಂದು ಕಂಡುಬಂದವು, ಆದರೆ ಅನೇಕ ಮೌಲ್ಯಮಾಪನ ವಿನ್ಯಾಸಗಳು ದುರ್ಬಲವಾಗಿವೆ. 1990 ರಿಂದ ಮಾಡಲಾದ ಅಭಿವೃದ್ಧಿಶೀಲ ರಾಷ್ಟ್ರಗಳ ಕಾರ್ಯಕ್ರಮಗಳ ಮೌಲ್ಯಮಾಪನಗಳ ಇತ್ತೀಚಿನ ವಿಮರ್ಶೆಯು ಎಂಟು ಸಮರ್ಪಕ ವಿನ್ಯಾಸಗಳಿರುವುದನ್ನು ಗುರುತಿಸಿದೆ. ಎಲ್ಲಾ ಪ್ರಕರಣಗಳಲ್ಲಿ (cases), ಶಾಲಾಪೂರ್ವ ಕಾರ್ಯಕ್ರಮಗಳಿಗೆ ದಾಖಲಾದ ಮಕ್ಕಳು ನಿಯಂತ್ರಣ ಗುಂಪಿನ ಮಕ್ಕಳಿಗಿಂತ ವಿವಿಧ ಸಂಜ್ಞಾನಾತಕ ಮತ್ತು ಸಾಮಾಜಿಕ ಫಲಿತಾಂಶಗಳಲ್ಲಿ ಗಮನಾರ್ಹವಾಗಿ ಉತ್ತಮವಾಗಿದ್ದಾರೆ. ಉದಾಹರಣೆಗೆ, ಮ್ಯಾನ್ಮಾರ್ ಮತ್ತು ನೇಪಾಳದಲ್ಲಿ, ಹಿಂದುಳಿದ ಮಕ್ಕಳಿಗಾಗಿ ಸೇವ್ ದಿ ಚಿಲ್ಡ್ರನ್ ಶಾಲಾಪೂರ್ವ ಕಾರ್ಯಕ್ರಮವು (save the children preschool program) ಶಾಲಾ ಪ್ರವೇಶ, ಧಾರಣ ಮತ್ತು ಮ್ಯಾನ್ಮಾರ್‌ನಲ್ಲಿ ಸಂಜ್ಞಾನಾತ್ಮಕ ಬೆಳವಣಿಗೆಯಲ್ಲಿ ಸುಧಾರಣೆಗಳನ್ನು ತಂದಿತು.

## ಮಕ್ಕಳ ಬೆಳವಣಿಗೆ ಮತ್ತು ಶೈಕ್ಷಣಿಕ ಸಾಧನೆಗಳನ್ನು ಬೆಂಬಲಿಸಲು ಕುಟುಂಬದ ಸಾಮರ್ಥ್ಯವನ್ನು ಸುಧಾರಿಸುವುದು: ಪೋಷಕ ಶಿಕ್ಷಣ ಮತ್ತು ಬೆಂಬಲ ಕಾರ್ಯಕ್ರಮಗಳು

ಮಕ್ಕಳ ಯೋಗಕ್ಷೇಮವನ್ನು ಸುಧಾರಿಸುವ ಗುರಿಯೊಂದಿಗೆ ಸ್ಪಂದಿಸುವ ಪ್ರಚೋದನೆ ಅಥವಾ ಕಲಿಕಾ ಸಾಮಗ್ರಿಗಳ ಕೊರತೆಯಂತಹ ಕುಟುಂಬದ ಗುಣಲಕ್ಷಣಗಳ ಮೇಲೆ ಬಡತನದ ಋಣಾತ್ಮಕ ಪರಿಣಾಮಗಳನ್ನು ಸುಧಾರಿಸಲು ಪೋಷಕರ ಶಿಕ್ಷಣ ಮತ್ತು ಬೆಂಬಲ ಕಾರ್ಯಕ್ರಮಗಳನ್ನು ರೂಪಿಸಲಾಗಿದೆ. ಈ ಕಾರ್ಯಕ್ರಮಗಳು ಆರೋಗ್ಯ ಕೇಂದ್ರ ಅಥವಾ ವ್ಯವಸ್ಥೆ, ತರಬೇತಿ ಪಡೆದ ಕೆಲಸಗಾರರಿಂದ ಮನೆಗೆ ಭೇಟಿ

ನೀಡುವುದು, ಬೆಳವಣಿಗೆಯ ಮೇಲ್ವಿಚಾರಣೆಯೊಂದಿಗೆ ಸಮಾಲೋಚನೆಯನ್ನು ಸಂಯೋಜಿಸುವುದು, ಪೋಷಕರಿಗೆ ಗುಂಪು ಅವಧಿಗಳನ್ನು ಒದಗಿಸುವುದು ಮತ್ತು ಮಾಧ್ಯಮವನ್ನು ತಲುಪುವುದು ಸೇರಿದಂತೆ ವಿವಿಧ ವಿತರಣಾ ಕಾರ್ಯವಿಧಾನಗಳನ್ನು ಹೊಂದಿವೆ. ಅವಧಿಪೂರ್ವ ಜನನ ಅಥವಾ ಕಡಿಮೆ-ಜನನ ತೂಕ(LBW)ದಂತಹ ಕೆಲವು ನಿರ್ದಿಷ್ಟ ಅಪಾಯಕಾರಿ ಅಂಶವನ್ನು ಹೊಂದಿರುವ ಮಕ್ಕಳಿಗೆ ಕೆಲವು ಕಾರ್ಯಕ್ರಮಗಳನ್ನು ಸಂಚಾಲಿತಗೊಳಿಸಲಾಗಿದೆ.

**ಯುಎಸ್ಎ**

ಯುನೈಟೆಡ್ ಸ್ಟೇಟ್ಸ್‌ನಲ್ಲಿ, ಹೆಚ್ಚಿನ ಅಪಾಯದಲ್ಲಿರುವ (high risk) ಮಕ್ಕಳಿಗಾಗಿ ಇರುವ ಕಾರ್ಯಕ್ರಮಗಳು ಅವರ ಅಲ್ಪಾವಧಿಯ ಮತ್ತು ದೀರ್ಘಾವಧಿಯ ಫಲಿತಾಂಶಗಳನ್ನು ಸುಧಾರಿಸುವಲ್ಲಿ ಪರಿಣಾಮಕಾರಿ ಎಂದು ತೋರಿಸಲಾಗಿದೆ. ಸ್ವೀಟ್ ಮತ್ತು ಆಪ್ಪೆಲ್ಬ್ಯಾಮ್ ಅವರುಗಳು 60 ಅಧ್ಯಯನಗಳ ಮೆಟಾ-ವಿಶ್ಲೇಷಣೆಯಲ್ಲಿ ಪೋಷಕರ ವರ್ತನೆಗಳು ಮತ್ತು ನಡವಳಿಕೆ ಹಾಗೂ ಮಕ್ಕಳ ಸಂಜ್ಞಾನಾತ್ಮಕ ಹಾಗೂ ಸಾಮಾಜಿಕ-ಭಾವನಾತ್ಮಕ ಬೆಳವಣಿಗೆಗಳಲ್ಲಿ ಸುಧಾರಣೆಗಳನ್ನು ಕಂಡುಕೊಂಡರು. ಆದಾಗ್ಯೂ, ಪರಿಣಾಮದ ಪ್ರಮಾಣಗಳು ಹಲವು ಬಾರಿ ಚಿಕ್ಕದಾಗಿದ್ದು, ಮನೆಗೆ ಭೇಟಿ ನೀಡುವ ಕಾರ್ಯಕ್ರಮಗಳ ವೆಚ್ಚ-ಪ್ರಯೋಜನಗಳ (cost-benefit) ಬಗ್ಗೆ ಕಳವಳವನ್ನು ಉಂಟುಮಾಡುತ್ತದೆ. ಹೆಚ್ಚಿನ ಅಪಾಯದ ಮತ್ತು ಬಡತನದಲ್ಲಿರುವ ಜನರಲ್ಲಿ ಪೋಷಕರ ಮಧ್ಯಸ್ಥಿಕೆಗಳು ಕಡಿಮೆ ಸಂಪನ್ಮೂಲಗಳನ್ನು ಹೊಂದಿರುವ ಕುಟುಂಬಗಳಲ್ಲಿ ಪರಿಣಾಮಕಾರಿಯಾಗಿರುವುದಿಲ್ಲವೆಂಬುದು ಇತರ ಅಧ್ಯಯನಗಳು ಪ್ರಸತುತಪಡಿಸಿದ ಎರಡನೇ ಕಾಳಜಿಯಾಗಿದೆ. ಈ ಸಂದರ್ಭದಲ್ಲಿ, ಹೆಚ್ಚು ಸಮಗ್ರ ವಿಧಾನದ ಅಗತ್ಯವಿರಬಹುದು.

ಕಡಿಮೆ ಆದಾಯದ ಮಕ್ಕಳಿಗಾಗಿ ಕೆಲವು ಯಶಸ್ವಿ ಪೋಷಕರ ಕಾರ್ಯಕ್ರಮಗಳನ್ನು ಪ್ರಾಥಮಿಕ ಆರೈಕೆಯ ಮೂಲಕ ಕಾರ್ಯಗತಗೊಳಿಸಲಾಗುತ್ತದೆ. ಯಾದೃಚ್ಛಿಕ ನಿಯಂತ್ರಣದ ಯೋಜನಾ ಸ್ವರೂಪಗಳನ್ನು (randomized control design) ಬಳಸಿದ ಮೂರು ಕಾರ್ಯಕ್ರಮಗಳು ಮಕ್ಕಳ ಬೆಳವಣಿಗೆಯ ಅಂಶಗಳ ಮೇಲೆ ಪ್ರಯೋಜನಕಾರಿ ಪರಿಣಾಮಗಳನ್ನು ತೋರಿಸಿವೆ. ರೀಚ್ ಔಟ್ ಅಂಡ್ ರೀಡ್ (reach out and read) ಎನ್ನುವುದು ರಾಷ್ಟ್ರೀಯ ಕಾರ್ಯಕ್ರಮವಾಗಿದ್ದು, ಇದರಲ್ಲಿ ಪೋಷಕರು ಮತ್ತು ಆರೈಕೆದಾರರಿಗೆ ಆರೋಗ್ಯ ಭೇಟಿಯಲ್ಲಿ ಪುಸ್ತಕಗಳನ್ನು ನೀಡಲಾಗುತ್ತದೆ ಮತ್ತು ಅವರ ಮಕ್ಕಳಿಗೆ ಓದಿ ಹೇಳಲು ಪ್ರೋತ್ಸಾಹಿಸಲಾಗುತ್ತದೆ. ಮೌಲ್ಯಮಾಪನಗಳು ಪೋಷಕರ ಓದುವ ನಡವಳಿಕೆ ಮತ್ತು ಮಕ್ಕಳ ಭಾಷೆ ಮತ್ತು ಆರಂಭಿಕ ಸಾಕ್ಷರತೆಯ ಕೌಶಲ್ಯಗಳ ನಿಟ್ಟಿನ ಪ್ರಯೋಜನಕಾರಿ ಪರಿಣಾಮಗಳನ್ನು ತೋರಿಸಿವೆ. ಆರೋಗ್ಯಕರ ಹಂತಗಳು ಬೆಳವಣಿಗೆಯ ಮತ್ತು ನಡವಳಿಕೆಯ ಸಲಹೆ ಮತ್ತು ಅಪಾಯದ ಅಂಶದ ಸ್ಕ್ರೀನಿಂಗ್ ಅನ್ನು ಒಳಗೊಂಡಿರುತ್ತವೆ. ಇತ್ತೀಚಿನ ಮೌಲ್ಯಮಾಪನವು ಆರೋಗ್ಯದ ಬಗ್ಗೆ ಕಾಳಜಿ, ಹಾಲುಣಿಸುವಿಕೆ, ದೂರದರ್ಶನ ವೀಕ್ಷಣೆ ಮತ್ತು ಗಾಯದ ತಡೆಗಟ್ಟುವಿಕೆ ಸೇರಿದಂತೆ ಪೋಷಕರ ನಡವಳಿಕೆಗಳಲ್ಲಿ ಪ್ರಯೋಜನಕಾರಿ ಪರಿಣಾಮಗಳನ್ನು ತೋರಿಸಿದೆ. ಆದಾಗ್ಯೂ, ನಿಯಂತ್ರಣ ಗುಂಪಿನ ತಾಯಂದಿರಿಗಿಂತ ಮಧ್ಯಸ್ಥಿಕೆಯ ಗುಂಪಿನ ತಾಯಂದಿರು ಹೆಚ್ಚು ಖಿನ್ನತೆಯ ಲಕ್ಷಣಗಳನ್ನು ವರದಿ ಮಾಡಿದ್ದಾರೆ. ಮೂರನೇ ಉದಾಹರಣೆಯೆಂದರೆ, ಪೋಷಕರು ಮತ್ತು ಮಗುವಿನ ಆಟವಾಡುವ ವೀಡಿಯೊ ಟೇಪ್ ಮಾಡಿ ಅದನ್ನು ಪೋಷಕರೊಂದಿಗೆ ಮಕ್ಕಳ ಬೆಳವಣಿಗೆಯ ತಜ್ಞರಿಂದ ವಿಮರ್ಶಿಸುವುದು. ಮೌಲ್ಯಮಾಪನವು ಮಕ್ಕಳ ಸಂಜ್ಞಾನಾತ್ಮಕ ಕೌಶಲ್ಯಗಳ ಮೇಲೆ ಮಧ್ಯಸ್ಥಿಕೆಯ ಪ್ರಯೋಜನಕಾರಿ ಪರಿಣಾಮಗಳನ್ನು ಮತ್ತು ಪೋಷಕರ ಒತ್ತಡ ಕಡಿಮೆಯಾಗಿರುವುದನ್ನು ತೋರಿಸಿದೆ.

**ಅಭಿವೃದ್ಧಿಶೀಲ ರಾಷ್ಟ್ರಗಳು**

ಬಡತನದಲ್ಲಿ ವಾಸಿಸುವ ಮಕ್ಕಳು, ಅನಾಥರು ಮತ್ತು ವೈದ್ಯಕೀಯ ಅಪಾಯದಲ್ಲಿರುವ ಮಕ್ಕಳು ಸೇರಿದಂತೆ ಅಭಿವೃದ್ಧಿಶೀಲ ರಾಷ್ಟ್ರಗಳ ಚಿಕ್ಕ ಮಕ್ಕಳ ಮೇಲೆ ಪೋಷಕರ ಮೂಲಕ ಸಂಜ್ಞಾನಾತ್ಮಕ ಪ್ರಚೋದನೆಯ ಪ್ರಭಾವವನ್ನು ನಿರ್ಣಯಿಸುವ ಹದಿನಾರು ಪ್ರಾಯೋಗಿಕ ಪರಿಣಾಮಕಾರಿತ್ವದ ಪ್ರಯೋಗಗಳನ್ನು ಗುರುತಿಸಲಾಗಿದೆ. ಉದಾಹರಣೆಗೆ, ಬ್ರೆಜಿಲ್‌ನಲ್ಲಿ, 156 ಕಡಿಮೆ ಸಾಮಾಜಿಕ ಆರ್ಥಿಕ ಸ್ಥಿತಿಯಲ್ಲಿದ್ದ 13ರಿಂದ 17-ತಿಂಗಳ ವಯಸ್ಸಿನ ಶಿಶುಗಳನ್ನು ವಾಸಸ್ಥಳದ ಆಧಾರದ ಮೇಲೆ ಮಧ್ಯಸ್ಥಿಕೆ ಅಥವಾ ನಿಯಂತ್ರಣ ಗುಂಪಿಗೆ ನಿಯೋಜಿಸಲಾಯಿತು ಮತ್ತು ಅವರ ತಾಯಂದಿರಿಗೆ ಆಟಿಕೆಗಳನ್ನು ತಯಾರಿಸಲು ಮತ್ತು ಮಗುವಿನ ಬೆಳವಣಿಗೆಯನ್ನು ಉತ್ತೇಜಿಸಲು ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲು ಕಲಿಸಲಾಯಿತು. 18 ತಿಂಗಳುಗಳಲ್ಲಿ ಮಧ್ಯಸ್ಥಿಕೆಯ ಗುಂಪಿನಲ್ಲಿ ನಿಯಂತ್ರಣದ ಗುಂಪಿಗಿಂತ Bayley scale of infant development -BSIDಯಲ್ಲಿ ಬೌದ್ಧಿಕ ಅಂಕ (mental score) (+9.4 ಅಂಕಗಳು) ಮತ್ತು ಸ್ನಾಯು ಅಂಕಗಳು

(motor scores) (+8.2 ಅಂಕಗಳು) ಹೆಚ್ಚಾಗಿದ್ದವು. 100ಕ್ಕಿಂತ ಕೆಳಗಿನ ಆರಂಭಿಕ BSID ಸ್ಕೋರ್‌ಗಳನ್ನು ಹೊಂದಿರುವ ಶಿಶುಗಳಿಗೆ ವ್ಯತ್ಯಾಸಗಳು ಬಲವಾಗಿದ್ದವು. 16 ಅಧ್ಯಯನಗಳಲ್ಲಿ ಒಂದನ್ನು ಹೊರತುಪಡಿಸಿ ಉಳಿದೆಲ್ಲವೂ ಉತ್ತೇಜಿಸದ ನಿಯಂತ್ರಣಗಳಿಗೆ ಹೋಲಿಸಿದರೆ ಹೆಚ್ಚುವರಿ ಸಂಜ್ಞಾನಾತ್ಮಕ ಪ್ರಚೋದನೆ ಅಥವಾ ಪೋಷಕರ ಚಟುವಟಿಕೆಗಳ ಮೂಲಕ ಕಲಿಕೆಯ ಅವಕಾಶಗಳನ್ನು ನೀಡಲಾದ ಚಿಕ್ಕ ಮಕ್ಕಳಲ್ಲಿ ಹೆಚ್ಚಿನ ಸಂಜ್ಞಾನಾತ್ಮಕ ಕಾರ್ಯವನ್ನು ವರದಿ ಮಾಡಿವೆ.

ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಪಾಲಕತ್ವದ ಕಾರ್ಯಕ್ರಮಗಳ (ಪರಿಣಾಮಕಾರಿತ್ವದ ಪ್ರಯೋಗಗಳಲ್ಲ) ಮೌಲ್ಯಮಾಪನಗಳ ಇತ್ತೀಚಿನ ವಿಮರ್ಶೆಯು ಆರು ಪೋಷಕ ಮತ್ತು ಪೋಷಕ-ಮಕ್ಕಳ ಕಾರ್ಯಕ್ರಮಗಳನ್ನು ಗುರುತಿಸಿದೆ. ಆರು ಮೌಲ್ಯಮಾಪನಗಳಲ್ಲಿ ಐದು ಮೌಲ್ಯಮಾಪನಗಳು ನಿಯಂತ್ರಣ ಗುಂಪಿನೊಂದಿಗೆ ಹೋಲಿಸಿದರೆ ಮಕ್ಕಳ ಬೆಳವಣಿಗೆಯ ಮೇಲೆ ಗಮನಾರ್ಹ ಪರಿಣಾಮಗಳನ್ನು ವರದಿ ಮಾಡಿವೆ.  ಯಶಸ್ವಿ ಕಾರ್ಯಕ್ರಮಗಳು ಮನೆ ಭೇಟಿ ನೀಡುವ ಮೂಲಕ ಅಥವಾ ಆರೈಕೆ ಮಾಡುವವರ ಗುಂಪಿನ ಮಾತುಕತೆಗಳ ಮೂಲಕ ಕೇವಲ ಚರ್ಚೆಗಳಿಗಿಂತ ಹೆಚ್ಚಾಗಿ ಚಟುವಟಿಕೆ ಆಧಾರಿತ ಕಲಿಕೆಯನ್ನು (ಚಟುವಟಿಕೆಗಳನ್ನು ಮಾಡುವುದಕ್ಕಿಂತ ಹೆಚ್ಚಾಗಿ ಮಕ್ಕಳೊಂದಿಗೆ ಚಟುವಟಿಕೆಗಳನ್ನು ಅಭ್ಯಾಸ ಮಾಡಲು ಸಾಧ್ಯವಾಗುವಂತಹ), ಮತ್ತು ಪ್ರಾತ್ಯಕ್ಷಿಕೆಗಳನ್ನು ಬಳಸಿಕೊಂಡವು.  ಉದಾಹರಣೆಗೆ, ಜಮೈಕಾದಲ್ಲಿ, ಆರೋಗ್ಯ ಕಾರ್ಯಕರ್ತರು ತಮ್ಮ ಮಕ್ಕಳ ಕಲಿಕೆಯನ್ನು ಹೇಗೆ ಪ್ರೋತ್ಸಾಹಿಸಬೇಕು ಎಂಬುದನ್ನು ಪೋಷಕರಿಗೆ ತೋರಿಸಲು ಅಪಾಯದಲ್ಲಿರುವ ಮನೆಗಳಿಗೆ ಭೇಟಿ ನೀಡಿದರಲ್ಲದೆ, ಇದರಿಂದ ಮಕ್ಕಳ ಬೆಳವಣಿಗೆಯ ಮೇಲೆ ಗಮನಾರ್ಹ ಪರಿಣಾಮಗಳು ಕಂಡುಬಂದವು.

ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ, ಆರೋಗ್ಯ ಸೇವೆಗಳು 3 ವರ್ಷದೊಳಗಿನ ಮಕ್ಕಳ ಕುಟುಂಬಗಳೊಂದಿಗೆ ಏಕೈಕ ಸಂಪರ್ಕ ಬಿಂದುವಾಗಿರಬಹುದು, ಮತ್ತು ಈ ಸಂಪರ್ಕ ಬಿಂದುಗಳನ್ನು ಮಕ್ಕಳ ಬೆಳವಣಿಗೆಯನ್ನು ಮೌಲ್ಯಮಾಪನ ಮಾಡಲು, ಬೆಳವಣಿಗೆಯನ್ನು ಉತ್ತೇಜಿಸಲು ಪೋಷಕರಿಗೆ ಸಲಹೆಯನ್ನು ನೀಡಲು ಮತ್ತು ಮಕ್ಕಳನ್ನು ಬೆಳೆಸುವುದಕ್ಕೆ ಸಂಬಂಧಿಸಿದ ಸರ್ವೇಸಾಮಾನ್ಯ ಸಮಸ್ಯೆಗಳನ್ನು ಪರಿಹರಿಸಲು ಬಳಸಬಹುದು. ಎಲ್ಲಾ ದೇಶಗಳಲ್ಲಿ ಅರ್ಧಕ್ಕಿಂತ ಹೆಚ್ಚು ದೇಶಗಳು ತಾಯಿಯ ಬಳಿ ಇರುವ ಬೆಳವಣಿಗೆಯ ಕಾರ್ಡ್‌ಗಳಲ್ಲಿ ಮಗುವಿನ ಬೆಳವಣಿಗೆಯ ಮಾಹಿತಿಯನ್ನು ಹೊಂದಿದ್ದರೂ, ಈ ಮಾಹಿತಿಯ ನಿಜವಾದ ಬಳಕೆ ಸೀಮಿತವಾಗಿರಬಹುದು. ಹೆಚ್ಚು ಪರಿಣಾಮಕಾರಿಯಾದ ಮಧ್ಯಸ್ಥಿಕೆಯ ಮಾದರಿಯನ್ನು ಒದಗಿಸುವ ಪ್ರಯತ್ನದಲ್ಲಿ, ವಿಶ್ವ ಆರೋಗ್ಯ ಸಂಸ್ಥೆಯು ಬಾಲ್ಯದ ಕಾಯಿಲೆಗಳ ಸಮಗ್ರ ನಿರ್ವಹಣೆಯ (integral management of childhood illnesses) ಭಾಗವಾಗಿ ಬೆಳವಣಿಗೆಯ ಸಂರಕ್ಷಣೆಯ ಮಾಡ್ಯೂಲ್ (care for development module) ಅನ್ನು ರೂಪಿಸಿದೆ. ಟರ್ಕಿಯ ಅಂಕಾರಾದಲ್ಲಿನ ಹೊರರೋಗಿ ಕ್ಲಿನಿಕ್‌ನಲ್ಲಿನ ಪ್ರಯೋಗದಲ್ಲಿ, ಅಲ್ಪಾವಧಿಯ ಮಧ್ಯಸ್ಥಿಕೆಯ 1 ತಿಂಗಳ ನಂತರ ನಿಯಂತ್ರಣ ಗುಂಪಿಗೆ ಹೋಲಿಸಿದರೆ ಬೆಳವಣಿಗೆಯ ಸಂರಕ್ಷಣೆಯ ಪ್ರಾಯೋಗಿಕ ಗುಂಪು ಮನೆಯ ಪರಿಸರದ ಗುಣಮಟ್ಟದಲ್ಲಿ ಗಣನೀಯವಾಗಿ ಹೆಚ್ಚಿನ ಅಂಕಗಳನ್ನು ಹೊಂದಿದೆ. ಬೆಳವಣಿಗೆಯ ಸಂಕ್ಷಿಪ್ತ ಮಾಡ್ಯೂಲ್ ಅನ್ನು ಬೆಳವಣಿಗೆಯ ಜೊತೆ ಸೇರಿಸುವುದರಿಂದ ಮಗುವಿನ ಆರೋಗ್ಯ ರಕ್ಷಣೆ ಅಥವಾ ಚೇತರಿಕೆಯ ಮೇಲೆ ಯಾವುದೇ ಋಣಾತ್ಮಕ ಪರಿಣಾಮಗಳಿಲ್ಲ ಎಂದು ಲೇಖಕರು ಗಮನಿಸಿದರು. ಆರೋಗ್ಯ ಕ್ಷೇತ್ರದ ಕಾರ್ಯಕ್ರಮಗಳಲ್ಲಿ ಬೆಳವಣಿಗೆಯ ಮಾಹಿತಿಯನ್ನು ಅಳವಡಿಸಲು ಅನೇಕ ಪ್ರಯತ್ನಗಳು ಹೊರಹೊಮ್ಮುತ್ತಿದ್ದರೂ ಸಹ ಈ ಹಂತದಲ್ಲಿ ಈ ವಿಧಾನಗಳ ಪರಿಣಾಮಕಾರಿತ್ವದ ಬಗ್ಗೆ ಪುರಾವೆಗಳ ಕೊರತೆಯಿದೆ.

**ಸಮಗ್ರ ಕಾರ್ಯಕ್ರಮಗಳು: ಶಾಲಾಪೂರ್ವ, ಸುಧಾರಿತ ಆರೋಗ್ಯ ಮತ್ತು ಪೋಷಣೆ ಸೇವೆಗಳು, ಮತ್ತು ಪಾಲಕತ್ವದ ಶಿಕ್ಷಣ ಮತ್ತು ಬೆಂಬಲ.**

ಸಮಗ್ರ ಕಾರ್ಯಕ್ರಮಗಳು ಮಕ್ಕಳ ಬೆಳವಣಿಗೆ ಮತ್ತು ಶೈಕ್ಷಣಿಕ ಫಲಿತಾಂಶಗಳನ್ನು ಸುಧಾರಿಸುವಲ್ಲಿ ಅನನುಕೂಲತೆಯ ವಿವಿಧ ಪರಿಣಾಮಗಳನ್ನು ಉದ್ದೇಶಿಸುತ್ತವೆ. ಹೆಚ್ಚಿನವುಗಳು ಪೋಷಣೆ ಮತ್ತು ಆರೋಗ್ಯ ಹಾಗೂ ಮಕ್ಕಳ ಬೆಳವಣಿಗೆಯ ಮೇಲೆ ನಿರ್ದಿಷ್ಟವಾಗಿ ಗಮನಹರಿಸುತ್ತವೆ ಮತ್ತು ಅನೇಕ ಕಾರ್ಯಕ್ರಮಗಳು ಸಮೂಹ ಮಾಧ್ಯಮಗಳು, ಮನೆ ಭೇಟಿ, ಶಾಲಾಪೂರ್ವ ಗುಂಪುಗಳು, ಆರೋಗ್ಯ ಸೇವೆಗಳ ಬಲಪಡಿಸುವಿಕೆ ಮತ್ತು ಪೂರಕ ಪೌಷ್ಟಿಕಾಂಶಗಳು ಸೇರಿದಂತೆ ವಿವಿಧ ಕಾರ್ಯವಿಧಾನಗಳನ್ನು ಬಳಸುತ್ತವೆ.

**ಯುಎಸ್‌ಎ**

ಶಿಶು ಆರೋಗ್ಯ ಮತ್ತು ಅಭಿವೃದ್ಧಿ ಕಾರ್ಯಕ್ರಮದಲ್ಲಿ (Infant health and development program), ಕಠಿಣವಾದ ಯಾದೃಚ್ಛಿಕ ಪ್ರಯೋಗದ ಸ್ವರೂಪವನ್ನು ಬಳಸಿಕೊಂಡು ಕಡಿಮೆ-ಆದಾಯದ, ಕಡಿಮೆ ಜನನ ತೂಕದ (low birth weight -LBW) ಶಿಶುಗಳ ನಡುವೆ ಬಹು ಕ್ಷೇತ್ರಗಳಲ್ಲಿ ಮನೆ ಮತ್ತು ಕೇಂದ್ರ-ಆಧಾರಿತ ಮಧ್ಯಸ್ಥಿಕೆ ಮಾಡಲಾಯಿತು, 3ನೇ ವಯಸ್ಸಿನಲ್ಲಿ ಮಧ್ಯಸ್ಥಿಕೆಯು ಕೊನೆಗೊಂಡಾಗ ಮಕ್ಕಳ ಸಂಜ್ಞಾನಾತ್ಮಕ ಕೌಶಲ್ಯಗಳ ಮೇಲೆ ಮಧ್ಯಸ್ಥಿಕೆಯ ಬಲವಾದ ಪರಿಣಾಮಗಳು, ವಿಶೇಷವಾಗಿ ಹೆಚ್ಚಿನ ಭಾರದ LBW ಶಿಶುಗಳಲ್ಲಿ ಕಂಡುಬಂದವು. ಆದಾಗ್ಯೂ, 5 ಮತ್ತು 8ನೇ ವಯಸ್ಸಿನಲ್ಲಿ ಮೌಲ್ಯಮಾಪನಗಳನ್ನು ನಡೆಸಿದಾಗ, ಪ್ರಯೋಜನಗಳು ದುರ್ಬಲಗೊಂಡವು ಮತ್ತು ಕುಟುಂಬಗಳ ಅಪಾಯದ ಸ್ಥಿತಿಗಳಿಗನುಗುಣವಾಗಿ ಬದಲಾದವು. ಮಧ್ಯಮ ಮಟ್ಟದ ಮಾನವ ಬಂಡವಾಳದ ಅಪಾಯವನ್ನು ಹೊಂದಿರುವ ಕುಟುಂಬಗಳ ಮಕ್ಕಳ ಬೌದ್ಧಿಕ ಸ್ತರದ (IQ) ಮೇಲೆ ಮಧ್ಯಸ್ಥಿಕೆಯ ನಿರಂತರ ಪ್ರಯೋಜನಗಳಿದ್ದರೂ ಅದು ಮಧ್ಯಮವಾಗಿತ್ತು. ಮಾನವ ಬಂಡವಾಳದ ಅಪಾಯವನ್ನು ತಾಯಿಯ ನಿರುದ್ಯೋಗ, ಸಲ್ಲಿಕೆಯಾದ ಧನ ಸಹಾಯ ಮತ್ತು ಪ್ರೌಢಶಾಲಾ ಶಿಕ್ಷಣಕ್ಕಿಂತ ಕಡಿಮೆ ಶಿಕ್ಷಣ ಇವುಗಳ ಮೂಲಕ ವ್ಯಾಖ್ಯಾನಿಸಲಾಗಿದೆ ಮತ್ತು ಮಧ್ಯಮ ಅಪಾಯವನ್ನು ಒಂದು ಅಥವಾ ಎರಡು ಅಪಾಯಗಳಿಂದ ಕೂಡಿರುವುದೆಂದು ವ್ಯಾಖ್ಯಾನಿಸಲಾಗಿದೆ. ಮಧ್ಯಸ್ಥಿಕೆಯಿಂದ ಪ್ರಯೋಜನ ಪಡೆಯುವುದಕ್ಕೆ ಸಂಬಂಧಿಸಿದಂತೆ, ಎಲ್ಲಾ ಮೂರು ಅಪಾಯಗಳನ್ನು ಹೊಂದಿರುವ ಕುಟುಂಬಗಳು ಅವುಗಳನ್ನು ಅಗಾಧ ಪ್ರಮಾಣದಲ್ಲಿ ಹೊಂದಿರಬಹುದು ಮತ್ತು ಯಾವುದೇ ಅಪಾಯಗಳಿಲ್ಲದ ಕುಟುಂಬಗಳು ಸಂಪನ್ಮೂಲಗಳನ್ನು ಸ್ವತಃ ಸಜ್ಜುಗೊಳಿಸಲು ಸಮರ್ಥವಾಗಿರಬಹುದು ಮತ್ತು ಮಧ್ಯಸ್ಥಿಕೆಯ ಅಗತ್ಯವಿಲ್ಲದಿರಬಹುದು.

ಯೋಜನೆಗಳ ಕಠಿಣ ಸ್ವರೂಪಗಳು ಮತ್ತು ಮೌಲ್ಯಮಾಪನಗಳನ್ನು ಕಾರ್ಯಗತಗೊಳಿಸಿದಾಗ, ಕೆಲವು ಆರಂಭಿಕ ಮಧ್ಯಸ್ಥಿಕೆ ಕಾರ್ಯಕ್ರಮಗಳು ಮಕ್ಕಳ ಶೈಕ್ಷಣಿಕ ಸಾಧನೆಯ ಮೇಲೆ ನಿರಂತರ ಪ್ರಯೋಜನಗಳನ್ನು ಹೊಂದಿರುವುದಿಲ್ಲ. ಶಾಲಾ ವಯಸ್ಸಿನಲ್ಲಿ ಬೌದ್ಧಿಕ ಸ್ತರದ (IQ) ಮಾಪನ ಮಾಡಿದಾಗ ಪೆರ್ರಿ ಮತ್ತು ಅಬೆಸೆಡೆರಿಯನ್ ಪ್ರಾಜೆಕ್ಟ್‌ಗಳೆರಡರ ಪರಿಣಾಮಗಳೂ ಸಹ ಕ್ಷೀಣಗೊಂಡವು, ಬೌದ್ಧಿಕ ಸ್ತರ(IQ)ಕ್ಕಿಂತಲೂ ಕಲಿಕೆಯ ಕೌಶಲ್ಯಗಳು ಮತ್ತು ಪ್ರೇರಣೆಯ ಮೇಲೆ ಆರಂಭಿಕ ಮಧ್ಯಸ್ಥಿಕೆಯ ಪರಿಣಾಮಗಳು ಕಾಣಿಸಬಹುದು ಮತ್ತು ನಿರಂತರ ಬೌದ್ಧಿಕ ಸ್ತರದ (IQ) ಅಭಿವೃದ್ಧಿಗೆ ಹೆಚ್ಚುವರಿ ಮಧ್ಯಸ್ಥಿಕೆಯ ಅಗತ್ಯವಿರಬಹುದು ಎಂಬುದನ್ನು ಅದು ಸೂಚಿಸುತ್ತದೆ.

ಆರಂಭಿಕ ಹೆಡ್ ಸ್ಟಾರ್ಟ್ ಪ್ರೋಗ್ರಾಂ (the early head start program), ಶಾಲೆಯ ಸಿದ್ಧತೆಯನ್ನು ಉತ್ತೇಜಿಸಲು ಮತ್ತು ಮೂರು ವರ್ಷಕ್ಕಿಂತ ಮುಂಚೆಯೇ ಮಕ್ಕಳ ಶೈಕ್ಷಣಿಕ ಸಾಧನೆಯ ಮೇಲೆ ಬಡತನದ ಋಣಾತ್ಮಕ ಪರಿಣಾಮಗಳನ್ನು ತಡೆಗಟ್ಟಲು ರೂಪಿಸಲಾದ ಆರಂಭಿಕ ಮಧ್ಯಸ್ಥಿಕೆ ಕಾರ್ಯಕ್ರಮದ ಮತ್ತೊಂದು ಉದಾಹರಣೆಯಾಗಿದೆ. 2004ರಲ್ಲಿ ಆರಂಭಿಕ ಹೆಡ್ ಸ್ಟಾರ್ಟ್ ಉತ್ತಮ ಗುಣಮಟ್ಟದ ಮನೆ ಭೇಟಿಗಳು, ಮಕ್ಕಳ ಆರೈಕೆ, ಕೇಸ್ ಮ್ಯಾನೇಜ್‌ಮೆಂಟ್, ಪೋಷಕ ಶಿಕ್ಷಣ, ಆರೋಗ್ಯ ರಕ್ಷಣೆ ಮತ್ತು ರೆಫರಲ್‌ಗಳ ಮೂಲಕ ದೇಶದಾದ್ಯಂತ 63,000 ಕಡಿಮೆ ಆದಾಯದ ಕುಟುಂಬಗಳಿಗೆ ಸೇವೆ ಸಲ್ಲಿಸಿದೆ. 3001 ಕುಟುಂಬಗಳ ಮೇಲೆ ಯಾದೃಚ್ಛಿಕ ಪ್ರಯೋಗದ ಇತ್ತೀಚಿನ ಮೌಲ್ಯಮಾಪನವು 3ನೇ ವಯಸ್ಸಿನಲ್ಲಿ, ಆರಂಭಿಕ ಹೆಡ್ ಸ್ಟಾರ್ಟ್‌ನಲ್ಲಿ ಭಾಗವಹಿಸಿದ ಮಕ್ಕಳು ನಿಯಂತ್ರಣ ಗುಂಪಿನ ಮಕ್ಕಳಿಗಿಂತ ಪ್ರಿಸ್ಕೂಲ್‌ಗೆ ಉತ್ತಮವಾಗಿ ತಯಾರಾಗುತ್ತಾರೆ ಎಂದು ತೋರಿಸಿದೆ, ಇದನ್ನು ಅವರ ಸಂಜ್ಞಾನಾತ್ಮಕ ಮತ್ತು ಭಾಷೆಯ ಬೆಳವಣಿಗೆ, ಪೋಷಕರೊಡನೆ ಭಾವನಾತ್ಮಕ ಸಂಬಂಧಗಳು, ಆಟಿಕೆಗಳ ಮೇಲೆ ಸ್ಥಿರವಾದ ಗಮನ ಮತ್ತು ಕಡಿಮೆ ಆಕ್ರಮಣಕಾರಿ ನಡವಳಿಕೆಯ ಆಧಾರದ ಮೇಲೆ ವ್ಯಾಖ್ಯಾನಿಸಲಾಗಿದೆ. ಹೆಚ್ಚುವರಿಯಾಗಿ, ಮಧ್ಯಸ್ಥಿಕೆಯನ್ನು ಪಡೆದ ಮಕ್ಕಳ ಪೋಷಕರು ನಿಯಂತ್ರಣ ಗುಂಪಿನ ಪೋಷಕರಿಗೆ ಹೋಲಿಸಿದರೆ ಹೆಚ್ಚು ಭಾವನಾತ್ಮಕವಾಗಿ ಬೆಂಬಲಿಗರಾಗಿದ್ದರು, ಹೆಚ್ಚು ಮಾತನಾಡುತ್ತಿದ್ದರು, ತಮ್ಮ ಮಕ್ಕಳಿಗೆ ಓದಲು ಹೆಚ್ಚು ಸಮಯ ಕಳೆದರು ಮತ್ತು ತಮ್ಮ ಮಕ್ಕಳನ್ನು ಹೊಡೆಯುವ ಸಾಧ್ಯತೆ ಕಡಿಮೆಯಾಗಿತ್ತು. ಈ ಸಂಶೋಧನೆಗಳು ಮಧ್ಯಸ್ಥಿಕೆಯಲ್ಲಿ ಪೋಷಕರನ್ನು ಒಳಗೊಳ್ಳುವ ಮತ್ತು ಅವರ ನಡವಳಿಕೆ ಮತ್ತು ಪಾಲಕತ್ವದ (parenting) ಮೇಲೆ ಮಧ್ಯಸ್ಥಿಕೆಯ ಪ್ರಭಾವದ ಮಾಪನದ ಪ್ರಾಮುಖ್ಯತೆಯನ್ನು ಎತ್ತಿ ತೋರಿಸುತ್ತವೆ.

ಡಂಕನ್, ಲುಡ್ವಿಗ್ ಮತ್ತು ಮ್ಯಾಗ್ನುಸನ್ ಅವರು ಬಡತನ-ಕಡಿಮೆ ಮಾಡುವ ಕಾರ್ಯವಿಧಾನವನ್ನು ಗುರಿಯಾಗಿಟ್ಟುಕೊಂಡು ಯುನೈಟೆಡ್ ಸ್ಟೇಟ್ಸ್‌ನಲ್ಲಿ 3- ಮತ್ತು 4 ವರ್ಷ ವಯಸ್ಸಿನ ಮಕ್ಕಳಿಗೆ ತೀವ್ರವಾದ, ಆರಂಭಿಕ ಶೈಕ್ಷಣಿಕ ಕಾರ್ಯಕ್ರಮವನ್ನು ಪ್ರತಿಪಾದಿಸಿದ್ದಾರೆ. ಅವರು ಉತ್ತಮ ಗುಣಮಟ್ಟದ, ಪಠ್ಯಕ್ರಮ-ಚಾಲಿತ ಕಾರ್ಯಕ್ರಮವನ್ನು ಉತ್ತಮ ತರಬೇತಿ ಮತ್ತು ಮೇಲ್ವಿಚಾರಣೆಯ ಶಿಕ್ಷಕರಿಂದ ಕಡಿಮೆ ಆದಾಯದವರಿಗೆ ಉಚಿತವಾಗಿ ನೀಡಬೇಕೆಂದು ಮತ್ತು ಹೆಚ್ಚಿನ ಸಂಪನ್ಮೂಲಗಳನ್ನು ಹೊಂದಿರುವ

ಕುಟುಂಬಗಳ ಮಕ್ಕಳಿಗೆ ಕಡಿಮೆ ವೇತನದ ಮೂಲಕ (sliding scale) ನೀಡಬೇಕೆಂದು ಪ್ರಸ್ತಾಪಿಸಿದರು. ಅರ್ಧ ದಿನದ ಶೈಕ್ಷಣಿಕ ಮತ್ತು ಅರ್ಧ-ದಿನದ ಶಿಶುಪಾಲನಾ ಘಟಕಗಳನ್ನು ಸೇರಿಸಲು ವೆಚ್ಚಗಳು ವರ್ಷಕ್ಕೆ ಸುಮಾರು $12,000ದಷ್ಟಿರುತ್ತದೆ ಮತ್ತು ಲಾಭ-ವೆಚ್ಚದ ಅನುಪಾತವು 4:1 ಮತ್ತು 7:1ರ ನಡುವೆಯಿರುತ್ತದೆ ಎಂದು ಅವರು ಅಂದಾಜು ಮಾಡುತ್ತಾರೆ, "ಇದು ರಾಷ್ಟ್ರದ ಅತ್ಯಂತ ಲಾಭದಾಯಕ ಸಾಮಾಜಿಕ ಹೂಡಿಕೆಗಳಲ್ಲಿ ಒಂದಾಗಿದೆ.".

## ಅಭಿವೃದ್ಧಿಶೀಲ ರಾಷ್ಟ್ರಗಳು

ಪೌಷ್ಠಿಕಾಂಶದ ಸ್ಥಿತಿ ಮತ್ತು ಮಗುವಿನ ಬೆಳವಣಿಗೆಗಳೆರಡನ್ನೂ ಸುಧಾರಿಸಲು ಸಂಯೋಜಿಸಿದ ಮಧ್ಯಸ್ಥಿಕೆಗಳನ್ನು ಸ್ವೀಕಾರಾರ್ಹ ಸ್ವರೂಪಗಳೊಂದಿಗೆ ನಡೆಸಿದ ದೊಡ್ಡ-ಪ್ರಮಾಣದ ಕಾರ್ಯಕ್ರಮಗಳ ಆರು ಮೌಲ್ಯಮಾಪನಗಳನ್ನು ಇತ್ತೀಚಿನ ಸಾಹಿತ್ಯ ಹುಡುಕಾಟದಲ್ಲಿ ಗುರುತಿಸಲಾಗಿದೆ. ಆರರಲ್ಲಿ ಐದು ಮಕ್ಕಳ ಬೆಳವಣಿಗೆಯ ಮೇಲೆ ಪ್ರಭಾವ ಬೀರಿವೆ. ಉದಾಹರಣೆಗೆ, ಫಿಲಿಪೈನ್ಸ್ ಆರಂಭಿಕ ಮಕ್ಕಳ ಅಭಿವೃದ್ಧಿ ಕಾರ್ಯಕ್ರಮವು ನಿಯಂತ್ರಣ ಗುಂಪಿನ ಮಕ್ಕಳಿಗೆ ಹೋಲಿಸಿದರೆ ಸಮಗ್ರ ಮಧ್ಯಸ್ಥಿಕೆಗಳಿಗೆ (ಆಹಾರ, ಆರೋಗ್ಯ ರಕ್ಷಣೆ, ಮನೆ ಭೇಟಿಗಳು ಮತ್ತು ಮಕ್ಕಳ ಅಭಿವೃದ್ಧಿ ಕೇಂದ್ರ) ಒಡ್ಡಲ್ಪಡುವ ಮಕ್ಕಳ ಬೆಳವಣಿಗೆಯ ಪರೀಕ್ಷೆಯ ಮೇಲೆ ಗಮನಾರ್ಹ ಪರಿಣಾಮಗಳನ್ನು ಕಂಡುಹಿಡಿದಿದೆ, ಮತ್ತು ಮೊದಲೇ ಪ್ರಾರಂಭ ವಾದವರಿಗೆ ಮತ್ತು ದೀರ್ಘಾವಧಿಯ ಅವಧಿಯನ್ನು ಹೊಂದಿರುವವರಿಗೆ ಪರಿಣಾಮದ ಪ್ರಮಾಣಗಳು ದೊಡ್ಡದಾಗಿದ್ದವು. ಆರನೆಯದು, ಉಗಾಂಡಾದಲ್ಲಿ ವಿಶ್ವಬ್ಯಾಂಕ್ ಬೆಂಬಲಿತ ಕಾರ್ಯಕ್ರಮವು ಪ್ರತಿರಕ್ಷಣೆ/ರೋಗನಿರೋಧಕ (immunization) ಮತ್ತು ಆರೋಗ್ಯ ಮಾಹಿತಿಗಾಗಿ ಮಕ್ಕಳ ಆರೋಗ್ಯ ದಿನಗಳು, ಶಿಶುಪಾಲನಾ ಕೇಂದ್ರಗಳಂತಹ ಸಮುದಾಯ ಆಧಾರಿತ ಯೋಜನೆಗಳು ಮತ್ತು ಪೋಷಣೆಯ ಕುರಿತು ಪೋಷಕರಿಗೆ ಮಾಹಿತಿ ಮತ್ತು ಮಕ್ಕಳನ್ನು ಹೇಗೆ ಸಿದ್ಧಪಡಿಸುವುದು ಎಂಬುದನ್ನು ಒಳಗೊಂಡಂತೆ ವಿವಿಧ ಸೇವೆಗಳನ್ನು ಒದಗಿಸಿದೆ. ಸರಾಸರಿ ಐದು ವರ್ಷ ವಯಸ್ಸಿನ ಮಕ್ಕಳಿಗೆ ಕೊಟ್ಟ ಸಂಜ್ಞಾನಾತ್ಮಕ ಪರೀಕ್ಷೆಯಲ್ಲಿ ಯಾವುದೇ ಪರಿಣಾಮಗಳಿಲ್ಲದಿದ್ದರೂ, ಪ್ರಾಯೋಗಿಕ ಮತ್ತು ನಿಯಂತ್ರಣ ಗುಂಪಿನ ಸರಾಸರಿ ಮೂರು ವರ್ಷ ವಯಸ್ಸಿನ ಮಕ್ಕಳ ಪೋಷಕರಲ್ಲಿ ಶಾಲೆಗೆ ಚಿಕ್ಕ ಮಕ್ಕಳನ್ನು ಸಿದ್ಧಪಡಿಸುವ ಬಗ್ಗೆ ಅವರ ನಂಬಿಕೆಗಳು ಮತ್ತು ನಡವಳಿಕೆಗಳಲ್ಲಿ ಗಮನಾರ್ಹ ವ್ಯತ್ಯಾಸಗಳು ಕಂಡುಬಂದಿವೆ. ನಿಯಂತ್ರಣ ಗುಂಪಿನ ಪೋಷಕರಿಗಿಂತ ಮಧ್ಯಸ್ಥಿಕೆಯ ಗುಂಪಿನಲ್ಲಿರುವ ಪೋಷಕರು ಶಾಲೆಯ ತಯಾರಿಯಲ್ಲಿ ಮತ್ತು ತಮ್ಮ ನಡವಳಿಕೆಗಳನ್ನು ಬದಲಾಯಿಸುವುದರಲ್ಲಿ ತಮ್ಮ ಪಾತ್ರದ ಪ್ರಾಮುಖ್ಯತೆಯನ್ನು ಗುರುತಿಸುವ ಸಾಧ್ಯತೆ ಹೆಚ್ಚು. ಇದು ಅವರ ನಿಲುವಿನಲ್ಲಿನ ಬದಲಾವಣೆಯನ್ನು ಪ್ರತಿಬಿಂಬಿಸುತ್ತದೆ. ನಿಕರಾಗುವಾದಲ್ಲಿನ ಒಂದು ದೊಡ್ಡ-ಪ್ರಮಾಣದ ಯೋಜನೆಯ ಇತ್ತೀಚಿನ ವರದಿಯು ಮಕ್ಕಳ ಬೆಳವಣಿಗೆಯ ನಿಟ್ಟಿನ ಸುಧಾರಿತ ಆರೋಗ್ಯ ಮತ್ತು ಪೋಷಣೆಯ ಸೇವೆಗಳ ಜೊತೆಗೆ ತಾಯಂದಿರನ್ನು ಶಿಶುಪಾಲನಾ ಕೆಲಸಗಾರರನ್ನಾಗಿ ಮಾಡಲು ತರಬೇತಿ ನೀಡುವುದು ಗಮನಾರ್ಹ ಪರಿಣಾಮಗಳನ್ನು ನೀಡಿದೆ ಎಂದು ಕಂಡುಕೊಂಡಿದೆ. ಮಕ್ಕಳ ಶಾಲಾ ಸಿದ್ಧತೆಯನ್ನು ಸುಧಾರಿಸುವುದು ಮತ್ತು ಬಡ ಮಕ್ಕಳ ಶೈಕ್ಷಣಿಕ ಫಲಿತಾಂಶಗಳ ಮೇಲೆ ಪ್ರಭಾವ ಬೀರಲು ಸಾಧ್ಯವಾದರೂ, ಬಡ ಮತ್ತು ಹೊರಗಿಡಲ್ಪಟ್ಟ ಕುಟುಂಬಗಳಿಗೆ ಅವಕಾಶಗಳ ಸ್ವರೂಪದಲ್ಲಿ ಹೆಚ್ಚಿನ ಹೂಡಿಕೆಗಳಿಲ್ಲದೆ ಬಡತನವನ್ನು ಕಡಿಮೆ ಮಾಡಲು ಈ ಪರಿಣಾಮಗಳು ಸಾಕಾಗುವುದಿಲ್ಲ.

## ಬಡತನದ ಸ್ಥಿತಿಯಲ್ಲಿನ ಇತರ ಅಪಾಯಕಾರಿ ಅಂಶಗಳು

ಈ ಲೇಖನದಲ್ಲಿ ಚರ್ಚಿಸಲಾದ ಹೆಚ್ಚಿನ ಸಂಶೋಧನೆಗಳು ಆರ್ಥಿಕ ಮತ್ತು ಸಾಮಾಜಿಕ ಬಡತನದ ಅಪಾಯ ಮತ್ತು ಕುಟುಂಬ ಮಟ್ಟದ ಪ್ರಕ್ರಿಯೆಗಳನ್ನು ಚರ್ಚಿಸಿವೆ. ಆದಾಗ್ಯೂ, ಬಡ ಕುಟುಂಬಗಳ ಮಕ್ಕಳು ಇತರರಿಗಿಂತ ಹೆಚ್ಚಾಗಿ ಸಂಘರ್ಷ, ಹಿಂಸೆ ಮತ್ತು ಸಾಮಾಜಿಕ ಅಶಾಂತಿಯಿಂದ ಬಳಲುವ ಸಾಧ್ಯತೆ ಹೆಚ್ಚು. ಇನ್ನೂ, ಈ ಕಷ್ಟಕರ ಸ್ಥಿತಿಗಳಲ್ಲಿರುವ ಚಿಕ್ಕ ಮಕ್ಕಳಿಗೆ ಇರುವ ಅಪಾಯಗಳನ್ನು ಸುಧಾರಿಸಲು ಮಾಡಿದ ಪರಿಣಾಮಕಾರಿ ಮಧ್ಯಸ್ಥಿಕೆಗಳ ಮೌಲ್ಯಮಾಪನಗಳು ತುಲನಾತ್ಮಕವಾಗಿ ಕಡಿಮೆ. ಆದರೆ ಇದು ತಕ್ಷಣ ಗಮನ ಕೊಡಲು ಅರ್ಹವಾದ ಕೆಲಸದ ಕ್ಷೇತ್ರವಾಗಿದೆ. ಯುನೈಟೆಡ್ ಸ್ಟೇಟ್ಸ್‌ನಲ್ಲಿ, ಇವಾನ್ಸ್ ಅವರು ಅಮೆರಿಕನ್ ಮಕ್ಕಳ ಬಡತನಕ್ಕೆ ಸಂಬಂಧಿಸಿದ ಈ ವಿಶಾಲವಾದ ಸಂದರ್ಭೋಚಿತ ಸಮಸ್ಯೆಗಳಿಗೆ ಸಂಬಂಧಿಸಿದ ಹಲವಾರು ಅಪಾಯಗಳನ್ನು ವಿವರಿಸಿದ್ದಾರೆ. ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ, ಸಾಕಷ್ಟು ಸಾಮಾನ್ಯ ಮತ್ತು ಅನೇಕ ಅಪಾಯಗಳು ಬಡತನದಿಂದ ಉಲ್ಬಣಗೊಂಡಿವೆ. ಕೋಷ್ಟಕ 18, ವಿವಿಧ ರೀತಿಯ ಅಪಾಯಗಳನ್ನು ಎದುರಿಸುವ ಮಕ್ಕಳ ಸಂಖ್ಯೆಯನ್ನು ಮತ್ತು ಪ್ರತಿಯೊಂದರ ಋಣಾತ್ಮಕ ಪರಿಣಾಮಗಳಿಗೆ ಸಾಕ್ಷಿಯ ಗುಣಮಟ್ಟವನ್ನು ವಿಸ್ತೃತವಾಗಿ ಅಂದಾಜು ಮಾಡುತ್ತದೆ.

## ಬಡತನದ ಸನ್ನಿವೇಶದಲ್ಲಿ ಮಕ್ಕಳ ಬೆಳವಣಿಗೆ ಮತ್ತು ಶೈಕ್ಷಣಿಕ ಫಲಿತಾಂಶಗಳನ್ನು ಸುಧಾರಿಸಲು ಭವಿಷ್ಯದ ಕಾರ್ಯಕ್ರಮಗಳು ಮತ್ತು ನೀತಿಗಳಿಗೆ ಶಿಫಾರಸುಗಳು

ಬಡತನವು ಮಕ್ಕಳ ಅಪರ್ಯಾಪ್ತ ಬೆಳವಣಿಗೆ ಮತ್ತು ಸೀಮಿತ ಶೈಕ್ಷಣಿಕ ಫಲಿತಾಂಶಗಳ ನಿಟ್ಟಿನ ಸ್ಪಷ್ಟ ಅಪಾಯಕಾರಿ ಅಂಶವಾಗಿದೆ, ಮತ್ತು ಮಗುವಿನ ಜೀವನದ ಆರಂಭಿಕ ವರ್ಷಗಳಲ್ಲಿನ ಈ ಅಪಾಯವು ಕುಟುಂಬವು ಬಡತನದಿಂದ ಹೊರಬಂದರೂ ಮಗುವಿನ ಜೀವನದ ಮುಂದಿನ ಭಾಗದಲ್ಲಿಯೂ ಸಹ ಪರಿಣಾಮ ಬೀರುವುದು ಮುಂದುವರಿಯುತ್ತದೆ. ಬಡತನವನ್ನು ಕಡಿಮೆ ಮಾಡುವ ಮಾರ್ಗಗಳನ್ನು ಕಂಡುಹಿಡಿಯುವುದು ಮಕ್ಕಳ ಆರೋಗ್ಯಕರ ಬೆಳವಣಿಗೆಗೆ ಅವಶ್ಯಕ. ಆದಾಗ್ಯೂ, ಕೇವಲ ಶಿಕ್ಷಣ ಅಥವಾ ಆರ್ಥಿಕ ಬೆಳವಣಿಗೆ ಮಾತ್ರ ಸಾಕಾಗುವುದಿಲ್ಲ. ಹೂಡಿಕೆಯಿಂದ ಪ್ರಾರಂಭಿಸಿದ ಆರ್ಥಿಕ ಬೆಳವಣಿಗೆ ಮಾತ್ರ ಬಡತನವನ್ನು ತಗ್ಗಿಸುವುದಿಲ್ಲ ಎಂದು ವಿಶ್ವಬ್ಯಾಂಕ್ ಮುಖ್ಯ ಅರ್ಥಶಾಸ್ತ್ರಜ್ಞ ನಿಕೋಲಸ್ ಸ್ಟರ್ನ್ ಎಚ್ಚರಿಸಿದ್ದಾರೆ.

> ನಾವು ಬಡತನ ಕಡಿಮೆ ಮಾಡುವುದನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದಾಗ ನಾವು ಆರ್ಥಿಕ ಬೆಳವಣಿಗೆಯ ವಿಷಯವನ್ನು ಮಾತ್ರ ಯೋಚಿಸಬಾರದು. ಈ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳಲು ಬಡವರನ್ನು ಸಬಲೀಕರಣಗೊಳಿಸಲು ನಾವು ಕೆಲಸ ಮಾಡುವುದು ಅತ್ಯಗತ್ಯ. ಮತ್ತು ಬಡತನವು ಆದಾಯಕ್ಕಿಂತ ಹೆಚ್ಚಿನ ಆಯಾಮಗಳಲ್ಲಿ ಕಂಡುಬರುತ್ತದೆ. ಆದ್ದರಿಂದ, ಬಡತನವನ್ನು ಕಡಿಮೆ ಮಾಡುವ ಹೋರಾಟದಲ್ಲಿ ನಾವು ಎರಡನೇ ಆಧಾರವನ್ನು ಸಹ ಗುರುತಿಸಬೇಕು: ಅದುವೇ ಸಬಲೀಕರಣ. ಬಡವರನ್ನು ಸಬಲೀಕರಣಗೊಳಿಸಿ ಅವರು ಅವರು ಆರ್ಥಿಕ ಬೆಳವಣಿಗೆಯಲ್ಲಿ ಭಾಗವಹಿಸುವಂತಾಗಲು ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ರಕ್ಷಣೆಯಲ್ಲಿ ಹೂಡಿಕೆಗಳು ಮತ್ತುಅವರ ಜೀವನವನ್ನು ರೂಪಿಸುವ ನಿರ್ಧಾರಗಳಲ್ಲಿ ಅವರು ಭಾಗವಹಿಸಲು ಅನುವು ಮಾಡಿಕೊಡುವ ಸಂಸ್ಥೆಗಳನ್ನು ನಿರ್ಮಿಸುವ ಅಗತ್ಯವಿದೆ.

ಹೀಗಾಗಿ, ಸಬಲೀಕರಣ ಚೌಕಟ್ಟಿನ ಎಲ್ಲಾ ಅಂಶಗಳನ್ನು ಉದ್ದೇಶಿಸುವ - ಹೆಚ್ಚು ಮುಕ್ತ ಅವಕಾಶ ವ್ಯವಸ್ಥೆಗಳು ಮತ್ತು ವರ್ಧಿತ ವ್ಯಕ್ತಿಗತ ಮತ್ತು ಸಾಮೂಹಿಕ ಕತೃತ್ವ (agency) ಇರುವಂತಹ ಮಧ್ಯಸ್ಥಿಕೆಗಳ ಅಗತ್ಯವಿದೆ. ಈ ಬದಲಾವಣೆಗಳು ಬೆಳವಣಿಗೆಯ ವ್ಯವಸ್ಥೆಯ ಸಿದ್ಧಾಂತಗಳ (DST) ಪ್ರಕಾರ ಮಕ್ಕಳ ಮೇಲೆ ಹೆಚ್ಚುವರಿ ಪರಿಣಾಮಗಳನ್ನು ಬೀರಬಹುದು.

ಹೀಗೆ ಬಡತನದ ನಿವಾರಣೆಯು ಕೇವಲ ಆರ್ಥಿಕ ಪರಿಹಾರಗಳನ್ನು ಕೋರುವುದಲ್ಲದೆ ಸರ್ಕಾರಗಳು, ಸಮುದಾಯಗಳು ಮತ್ತು ಕುಟುಂಬಗಳು ಬಡತನದಿಂದಾಗುವ ಮಿತಿಗಳನ್ನು ಮತ್ತು ಲಾಕ್ಷಣಿಕ ಬೆಳವಣಿಗೆಯನ್ನು ಅಡ್ಡಿಪಡಿಸುವ ಹಾನಿಕಾರಕ ಪ್ರಕ್ರಿಯೆಗಳನ್ನು ಬದಲಾಯಿಸುವ ಕಾರ್ಯವಿಧಾನಗಳನ್ನು ಅಳವಡಿಸಿಕೊಳ್ಳುವುದನ್ನೂ ಆಗ್ರಹಿಸುತ್ತದೆ. ಮುಖ್ಯ ಪರಿಣಾಮಗಳ ಮಾದರಿಗಳು (main effects models) ಮಕ್ಕಳ ಬೆಳವಣಿಗೆಯೊಂದಿಗೆ ಬಡತನವನ್ನು ಸಂಬಂಧಿಸುವ ಪ್ರಕ್ರಿಯೆಗಳನ್ನು ಉದ್ದೇಶಿಸುವುದು ವಿರಳ ಮತ್ತು DSTಯಲ್ಲಿ ಅಂತರ್ಗತವಾಗಿರುವ ಮಧ್ಯಮ, ಮಧ್ಯಸ್ಥಿಕೆ ಮತ್ತು ವ್ಯವಹಾರ್ಯ ಪ್ರಕ್ರಿಯೆಗಳನ್ನು ಸೇರಿಸಲು ಅವನ್ನು ವಿಸ್ತರಿಸಬೇಕು. ಪುಷ್ಟೀಕರಿಸುವ ಪರಿಸರವನ್ನು ಒದಗಿಸುವ ಮತ್ತು ಮಕ್ಕಳ ಶಿಕ್ಷಣದ ಉದ್ದಕ್ಕೂ ಉಳಿಸಿಕೊಳ್ಳಬಹುದಾದ ಧನಾತ್ಮಕ ಸಂವಹನಗಳ ಮಾದರಿಗಳನ್ನು ಬೆಳೆಸಲು ಮಕ್ಕಳು ಮತ್ತು ಕುಟುಂಬಗಳನ್ನು ಸಕ್ರಿಯಗೊಳಿಸುವ ಮಧ್ಯಸ್ಥಿಕೆ ಕಾರ್ಯಕ್ರಮಗಳು ಅಗತ್ಯವಿದೆ.

**ಕೋಷ್ಟಕ 1. ಅಪರ್ಯಾಪ್ತ ಅಭಿವೃದ್ಧಿಯ ಅಪಾಯಕಾರಿ ಅಂಶಗಳು**

| **ಅಪಾಯ (**Risk) | **ವ್ಯಾಪನೆ (**Prevalence) | **ಮಕ್ಕಳ ಮೇಲೆ ಪರಿಣಾಮಗಳು (**Effects on children) | **ಪುರಾವೆಗಳ ಸಾಮರ್ಥ್ಯ (**Strength of Evidence) |
|---|---|---|---|
| ಕುಬ್ಜತನ a | 25–30% | 6–13 DQ ಅಂಕಗಳು, (0.4–0.8 SD) ಸಾಮಾಜಿಕ ಮತ್ತು ಭಾವುಕ ಪರಿಣಾಮಗಳು | ಬಲವಾಗಿದೆ |
| ಅಯೋಡಿನ್ ಕೊರತೆ | 35% | 9–13 IQ ಅಂಕಗಳು (1 SD) | ಬಲವಾಗಿದೆ |
| ಕಬ್ಬಿಣಾಂಶದ ಕೊರತೆ ರಕ್ತಹೀನತೆ | 20–30% | 1.73 IQ/10 g/L Hb; ಕೆಲವು ಪೂರಕ ಪ್ರಯೋಗಗಳು ಸ್ನಾಯು ಚಲನೆ, ಸಾಮಾಜಿಕ-ಭಾವನಾತ್ಮಕ, ಮತ್ತು ಸಂಜ್ಞಾನಾತ್ಮಕ | ಬಲವಾಗಿದೆ |

| | | | |
|---|---|---|---|
| | | ಬೆಳವಣಿಗೆಯಲ್ಲಿ 0.3-0.4 SDಯಷ್ಟು ಪ್ರಯೋಜನಗಳನ್ನು ತೋರಿಸುತ್ತವೆ | |
| ಮಗುವಿನ ಪ್ರಚೋದನೆ ಮತ್ತು ಕಲಿಕೆಯ ಅವಕಾಶಗಳ ಕೊರತೆ | 60–90% ಪೋಷಕರು ಪ್ರಚೋದಿಸುವುದಿಲ್ಲ | ಪ್ರಚೋದನೆ/ಕಲಿಕೆಯ ಅವಕಾಶಗಳನ್ನು ಒದಗಿಸುವುದು Iqನಲ್ಲಿ 0.5–1.0 SDಯಷ್ಟು ಪ್ರಯೋಜನಗಳನ್ನು ಹೊಂದಿವೆ | ಬಲವಾಗಿದೆ |
| ತಾಯಿಯ ಖಿನ್ನತೆ | 17%, ಈ ದರವು ಇನ್ನೂ ಹೆಚ್ಚಾಗಿರಬಹುದು. | ಸಂಜ್ಞಾನಾತ್ಮಕ ಬೆಳವಣಿಗೆಯಲ್ಲಿ 0.5ರಿಂದ 1.0 SD ಅಂಕಗಳು | ಪರಸ್ಪರ ಸಹಸಂಬಂಧಗಳು ಸ್ಪಷ್ಟವಾಗಿದೆ; ಚಿಕಿತ್ಸೆಯ ವಿಧಾನಗಳ ಅವಶ್ಯಕತೆ ಇದೆ |
| ಹಿಂಸೆ ಮತ್ತು ಸಂಘರ್ಷಕ್ಕೆ ಒಡ್ಡಲ್ಪಡುವುದು | 1990-2003ರಿಂದ 27-38% ದೇಶಗಳಲ್ಲಿ ಪ್ರಮುಖ ಸಶಸ್ತ್ರ ಸಂಘರ್ಷವು 20 ಮಿಲಿಯನ್ ಮಕ್ಕಳ ಮೇಲೆ ಪರಿಣಾಮ ಬೀರಿದೆ | ವರ್ತನೆಯ ಸಮಸ್ಯೆಗಳು, PTSD | ವಿಶೇಷವಾಗಿ ಮಧ್ಯಸ್ಥಿಕೆಗಳ ಕುರಿತಂತೆ ಸಂಶೋಧನೆಯ ತುರ್ತು ಅಗತ್ಯ |
| ಅಂತರ್ಗರ್ಭಾಶ(intrauterine)ಯದ ಕುಂಠಿತ ಬೆಳವಣಿಗೆ | 11% | ಕಡಿಮೆ ಜನನ ತೂಕವಿಲ್ಲದವರಿಗೆ ಹೋಲಿಸಿದರೆ 0.25 - 0.5 SD | 3 ವರ್ಷ ವಯಸ್ಸಿನವರೆಗೆ ಬೆಳವಣಿಗೆಯ ಕೊರತೆಗಳೊಂದಿಗೆ ಸಂಬಂಧಿಸಿದೆ; ದೀರ್ಘಾವಧಿಯ ಅಧ್ಯಯನಗಳ ಅವಶ್ಯಕತೆ |
| ಮಲೇರಿಯಾ | 90 ದೇಶಗಳಲ್ಲಿ ಜನಸಂಖ್ಯೆಯ 40% - 300-600 ಮಿಲಿಯ ಮಕ್ಕಳು | ತೀವ್ರವಾದ ಅಥವಾ ಮೆದುಳಿಗೆ ಸಂಬಂಧಿಸಿದ ಮಲೇರಿಯಾ ಅಥವಾ ಮಲೇರಿಯಾ ಪ್ರಕರಣಗಳ ಸಂಖ್ಯೆಗಳಿಗೆ ಸಂಬಂಧಿಸಿದಂತೆ ಗಮನಾರ್ಹ ಸಂಜ್ಞಾನಾತ್ಮಕ ದುರ್ಬಲತೆಗಳು | ಋಣಾತ್ಮಕ ಸಂಬಂಧಗಳು ಸ್ಪಷ್ಟ; ಹೆಚ್ಚಿನ ಅಧ್ಯಯನದ ಅಗತ್ಯವಿದೆ |
| ಸೀಸದ ಮಟ್ಟ | 40% | 2–5 IQ ಅಂಕಗಳು | ಅಭಿವೃದ್ಧಿ ಹೊಂದಿದ ಮತ್ತು ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಪರಸ್ಪರ ಸಹಸಂಬಂಧದ ಅಧ್ಯಯನಗಳು |
| ಎದೆ ಹಾಲುಣಿಸುವಿಕೆಯ ಕೊರತೆ | 40–50% | ಸಂಜ್ಞಾನದ ಮೇಲಿನ ಸಣ್ಣ ಪರಿಣಾಮಗಳು (2-5 IQ ಅಂಕಗಳು), ಅನುಬಂಧದ ಮೇಲೆ ಪರಿಣಾಮ ಬೀರಬಹುದು | ಸ್ಥಿರವಾದ ಆದರೆ ಸಣ್ಣದರಿಂದ ಮಧ್ಯಮ ಪರಿಣಾಮಗಳು; ಉತ್ತಮ ಅಧ್ಯಯನಗಳನ್ನು ರೂಪಿಸುವುದು ಕಷ್ಟ |
| ಪೋಷಕರ ಕಳೆದುಕೊಳ್ಳುವಿಕೆ | ಉಪ-ಸಹಾರನ್ ಆಫ್ರಿಕಾದಲ್ಲಿ 43 | ವಿವರಣಾತ್ಮಕ ಅಧ್ಯಯನಗಳು ಹೆಚ್ಚಿನ | ಮಧ್ಯಸ್ಥಿಕೆಗಳು ಮತ್ತು ಮಧ್ಯಸ್ಥಿಕೆ |

| | | | |
|---|---|---|---|
| | ಮಿಲಿಯಕ್ಕೂ ಹೆಚ್ಚು ಅನಾಥರು, 2003ರಲ್ಲಿ 6 ವರ್ಷಕ್ಕಿಂತ ಕಡಿಮೆ ವಯಸ್ಸಿನ 16% (7 ಮಿಲಿಯನ್) | ಮರಣ ಪ್ರಮಾಣವನ್ನು ತೋರಿಸುತ್ತವೆ, ಕೆಲವು ನಡವಳಿಕೆ ಸಮಸ್ಯೆಗಳು, ದುರ್ಬಲತೆಯ ಭಾವನೆ, ಖಿನ್ನತೆ, ಕಾಲಾನಂತರದಲ್ಲಿ ಸುಧಾರಿಸುತ್ತದೆ | ಸಂಶೋಧನೆಯ ಅಗತ್ಯವಿದೆ |
| ತಾಯಿಯ ಸ್ಪಂದಿಸುವಿಕೆಯ ಕೊರತೆ | ತಿಳಿದಿಲ್ಲ | ಕಡಿಮೆ ಸುರಕ್ಷಿತ ಭಾವನೆ, ಕಡಿಮೆ ಸಂಜ್ಞಾನಾತ್ಮಕ ಸಾಮರ್ಥ್ಯ ಮತ್ತು ಹೆಚ್ಚಿನ ನಡವಳಿಕೆಯ ಸಮಸ್ಯೆಗಳೊಂದಿಗೆ ಸಂಬಂಧಿಸಿದೆ | ಹೆಚ್ಚಿನ ಮಧ್ಯಸ್ಥಿಕೆ ಅಧ್ಯಯನಗಳ ಅಗತ್ಯವಿದೆ |
| ಸತುವಿನ ಕೊರತೆ | 33% | ಸಂಜ್ಞಾನಾತ್ಮಕ ಬೆಳವಣಿಗೆ ಮತ್ತು ಚಟುವಟಿಕೆ | ಮಿಶ್ರ ಫಲಿತಾಂಶಗಳು |
| ಕರುಳಿನ ಹೆಲ್ಮಿನ್ತ್ಸ್ | 33% | ಸಂಜ್ಞಾನಾತ್ಮಕ ಬೆಳವಣಿಗೆ | ಅಸಮಂಜಸ ಫಲಿತಾಂಶಗಳು |
| ಎಚ್ಐವಿ ಸೋಂಕು | 2% | ತೀವ್ರವಾಗಿರಬಹುದು; ಬೆಳವಣಿಗೆಯ ವಿಳಂಬಗಳು, ಭಾಷೆಯ ವಿಳಂಬಗಳು | ಅಪಾಯದ ಪುರಾವೆಗಳು ಪ್ರಬಲವಾಗಿವೆ |
| ಅತಿಸಾರ | ಸರ್ವೇಸಾಮಾನ್ಯ | ಸಂಜ್ಞಾನಾತ್ಮಕ ಬೆಳವಣಿಗೆಯೊಂದಿಗೆ ಕೆಲವು ಸಂಬಂಧಗಳು ಕಂಡುಬಂದಿವೆ | ಸೂಚಿಸುತ್ತದೆ; ಹೆಚ್ಚಿನ ಅಧ್ಯಯನದ ಅಗತ್ಯವಿದೆ |
| ಆರ್ಸೆನಿಕ್ | ಬಾಂಗ್ಲಾದೇಶ ಮುಂತಾದ ಪ್ರದೇಶಗಳಲ್ಲಿ ಅಧಿಕ | ಕೆಳ ಮಟ್ಟಕ್ಕಿಳಿದ ಬೌದ್ಧಿಕ ಸ್ತರ (IQ) | ಪರಸ್ಪರ ಸಹಸಂಬಂಧಿತ ಮಾಹಿತಿ; ದೊಡ್ಡ ಮಕ್ಕಳಲ್ಲಿ ಮಾತ್ರ ಪರೀಕ್ಷಿಸಲಾಗಿದೆ |
| ಮ್ಯಾಂಗನೀಸ್, ಕೀಟನಾಶಕಗಳು | ಪ್ರದೇಶವನ್ನು ಅವಲಂಬಿಸಿರುತ್ತದೆ | ಕೆಳ ಮಟ್ಟಕ್ಕಿಳಿದ ಬೌದ್ಧಿಕ ಸ್ತರ (IQ) | ಕೆಲವು ಮಾಹಿತಿ ಇದೆ ಆದರೆ ಇನ್ನೂ ಹೆಚ್ಚಿನ ಮಾಹಿತಿ ಅಗತ್ಯವಿದೆ |

a ಕುಬ್ಜತನವು ವಯಸ್ಸಿನ ಸ್ಕೋರ್ –2 ಸ್ಟ್ಯಾಂಡರ್ಡ್ ವಿಚಲನಗಳಿಗೆ ಅಥವಾ ಮಾನ್ಯತೆ ಪಡೆದ ಮಾನದಂಡಗಳ ಪ್ರಕಾರ ಸರಾಸರಿ ಎತ್ತರಕ್ಕಿಂತ ಕಡಿಮೆ ಎತ್ತರವನ್ನು ಸೂಚಿಸುತ್ತದೆ.

DQ, ಡೆವಲಪ್ಮೆಂಟಲ್ ಅಂಶ; SD, ಪ್ರಮಾಣಿತ ವಿಚಲನ; Hb, ಹಿಮೋಗ್ಲೋಬಿನ್; PTSD, post-traumatic stress disorder

ಆರ್ಥಿಕ ಬೆಳವಣಿಗೆ ಮತ್ತು ಸಬಲೀಕರಣಕ್ಕೆ ಪೂರಕವಾಗಿರುವ ಶಾಲೆಯ ಸಿದ್ಧತೆಯನ್ನು ಸುಧಾರಿಸಲು ವಿಜ್ಞಾನವು ಅತ್ಯಂತ ಪರಿಣಾಮಕಾರಿ ಆರಂಭಿಕ ಮಧ್ಯಸ್ಥಿಕೆ ವಿಧಾನಗಳನ್ನು ತಿಳಿಸಬೇಕು. ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿನ ಮಕ್ಕಳ ಬೆಳವಣಿಗೆಯ ಸಾಮರ್ಥ್ಯದ ನಷ್ಟವನ್ನು ತಪ್ಪಿಸಲು ಬಳಸಿದ ಕಾರ್ಯವಿಧಾನಗಳ ಇತ್ತೀಚಿನ ವಿಮರ್ಶೆಯು ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿನ ಸಾಕ್ಷ್ಯಾಧಾರಿತ ಶಿಫಾರಸುಗಳಿಗೆ ಆಧಾರವಾಗತಕ್ಕ ಮಕ್ಕಳ ಆರಂಭಿಕ ಬೆಳವಣಿಗೆಯ ಯಶಸ್ವಿ ಕಾರ್ಯಕ್ರಮಗಳ ಲಕ್ಷಣಗಳನ್ನು ಮತ್ತು ಹೆಚ್ಚುವರಿ ಸಂಶೋಧನೆಯ ಅಗತ್ಯವಿರುವ ಕ್ಷೇತ್ರಗಳನ್ನು ಗುರುತಿಸಿದೆ. ಅನೇಕ ಮಾನದಂಡಗಳು ಮತ್ತು ಶಿಫಾರಸುಗಳು ಓಲ್ಡ್ ಅವರು ಗುರುತಿಸಿದ ಯುನೈಟೆಡ್ ಸ್ಟೇಟ್ಸ್‌ನ ಶಾಲಾಪೂರ್ವ ಕಾರ್ಯಕ್ರಮಗಳಿಗೆ ಅಧ್ಯಯನ ಮಾಡಬೇಕಾದ ಸಮಸ್ಯೆಗಳೊಂದಿಗೆ ಹೊಂದಿಕೆಯಾಗುತ್ತವೆ. ಈ ಹೋಲಿಕೆ ಕೋಷ್ಟಕ 2ರಲ್ಲಿದೆ.

**ಕೋಷ್ಟಕ 2. ಯಶಸ್ವಿ ಕಾರ್ಯಕ್ರಮಗಳ ಗುಣಲಕ್ಷಣಗಳು ಮತ್ತು ಸಂಶೋಧನೆಗೆ ಅಗತ್ಯಗಳು**

| ಅಭಿವೃದ್ಧಿಶೀಲ ರಾಷ್ಟ್ರಗಳು | ಅಭಿವೃದ್ಧಿ ಹೊಂದಿದ ದೇಶಗಳು |
|---|---|
| ಆರೋಗ್ಯ, ಪೋಷಣೆ, ಶಿಕ್ಷಣ, ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಗಳ ಏಕೀಕರಣ | ಚಿಕ್ಕ ಮಕ್ಕಳ ಶಿಕ್ಷಣಕ್ಕಾಗಿ ನ್ಯಾಷನಲ್ ಅಸೋಸಿಯೇಷನ್ (National Association for the Education of Young Children) ಸ್ಥಾಪಿಸಿದ ಮಾನದಂಡಗಳೊಂದಿಗೆ ಸಂಯೋಜಿಸಿಕೊಂಡಿವೆ. |

| | |
|---|---|
| ಸರ್ಕಾರಿ ಸಂಸ್ಥೆಗಳು ಮತ್ತು ನಾಗರಿಕ ಸಮಾಜದೊಂದಿಗೆ ಸಹಯೋಗ | ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯಲ್ಲಿ ಸಂಯೋಜಿಸಿಕೊಂಡಿವೆ. |
| ಹಿಂದುಳಿದ ಮಕ್ಕಳು | ಕಡಿಮೆ ಆದಾಯದ ಮಕ್ಕಳು |
| ಕಾರ್ಯಕ್ರಮದ ತೀವ್ರತೆ ಮತ್ತು ಅವಧಿ | ಕಾರ್ಯಕ್ರಮದ ಆಯಾಮ ಮತ್ತು ಅವಧಿ |
| ಮಕ್ಕಳೊಂದಿಗೆ ನೇರ ಸಂಪರ್ಕ | |
| ಪೋಷಕರ ಒಳಗೊಳ್ಳುವಿಕೆ | ಪೋಷಕರ ಒಳಗೊಳ್ಳುವಿಕೆ |
| ಪ್ರಾರಂಭ ಮತ್ತು ಅನ್ವೇಷಣೆಗಾಗಿ ಮಕ್ಕಳಿಗೆ ಅವಕಾಶಗಳು | ಕಲಿಕೆ ಮತ್ತು ಹೊಂದಾಣಿಕೆಯನ್ನು ಉತ್ತೇಜಿಸಲು ಪಠ್ಯಕ್ರಮ |
| ಪುರಾವೆ ಆಧಾರಿತ ದೃಷ್ಟಿಕೋನದೊಂದಿಗೆ ಮಕ್ಕಳ ಪಾಲನೆಯ ಸಾಂಪ್ರದಾಯಿಕ ಅಭ್ಯಾಸಗಳು | |
| ಸಿಬ್ಬಂದಿ ಸಿದ್ಧತೆ ಮತ್ತು ಬೆಂಬಲ | ಶಿಕ್ಷಕರ ಬೆಂಬಲ |
| ಗುಣಮಟ್ಟಕ್ಕೆ ಗಮನ: ಸ್ವರೂಪ (ಉದಾ., ಶಿಕ್ಷಕ-ಮಕ್ಕಳ ಅನುಪಾತ, ಗುಂಪಿನ ಗಾತ್ರ) ಮತ್ತು ಪ್ರಕ್ರಿಯೆಗಳು (ಪಾಲನೆ ಮಾಡುವವರ ಹೃದಯವಂತಿಕೆ ಮತ್ತು ಸ್ಪಂದಿಸುವಿಕೆ) | ಗುಣಮಟ್ಟಕ್ಕೆ ಗಮನ (ಉದಾಹರಣೆಗೆ, ಶಿಕ್ಷಕ-ಮಕ್ಕಳ ಅನುಪಾತಗಳು) |
| ಅನಾಥರು ಸೇರಿದಂತೆ ಅನನುಕೂಲಕರ ಮಕ್ಕಳನ್ನು ಪರಿಣಾಮಕಾರಿಯಾಗಿ ತಲುಪಲು ಕಾರ್ಯನೀತಿಗಳ ಸುಧಾರಣೆ ಮತ್ತು ಮೌಲ್ಯಮಾಪನ | ಮಕ್ಕಳ ವಿವಿಧ ಗುಂಪುಗಳಾದ್ಯಂತ ಪ್ರಯೋಗಗಳನ್ನು ಪುನಾರಾವರ್ತಿಸುವುದು |
| ಪರಿಣಾಮಕಾರಿಯಾದ ಮತ್ತು ಅಸ್ತಿತ್ವದಲ್ಲಿರುವ ಆರೋಗ್ಯ, ಪೋಷಣೆ, ಶಿಕ್ಷಣ ಮತ್ತು ಸಾಮಾಜಿಕ ರಕ್ಷಣೆ ಸೇವೆಗಳ ಮೂಲಕ ವಿಸ್ತರಿಸಬಹುದಾದ ಮತ್ತು ಕಾರ್ಯಗತಗೊಳಿಸಬಹುದಾದ ECD ಕಾರ್ಯಕ್ರಮಗಳ ಗುಣಲಕ್ಷಣಗಳನ್ನು ಗುರುತಿಸುವುದು | ಪೋಷಕರ ಮತ್ತು ಮಕ್ಕಳ ಗುಣಲಕ್ಷಣಗಳಿಂದ ಕಾರ್ಯಕ್ರಮಗಳ ಪರಿಣಾಮಕಾರಿತ್ವವು ಹೇಗೆ ಬದಲಾಗುತ್ತದೆ ಎಂಬುದನ್ನು ಪರೀಕ್ಷಿಸುವುದು |
| ಬಡತನದ ಪರಿಣಾಮಗಳನ್ನು ತಗ್ಗಿಸುವಲ್ಲಿ ಮಕ್ಕಳ ಅಭಿವೃದ್ಧಿ ಕಾರ್ಯಕ್ರಮಗಳ ಪಾತ್ರವನ್ನು ಪರೀಕ್ಷಿಸುವುದು | |
| ಕಾರ್ಯಕ್ರಮದ ಪರಿಣಾಮಕಾರಿತ್ವವನ್ನು ಅಳೆಯಲು ಮಕ್ಕಳ ಅಭಿವೃದ್ಧಿಯ ನಿಟ್ಟಿನಲ್ಲಿ ಜಾಗತಿಕವಾಗಿ ಅಂಗೀಕರಿಸಲ್ಪಟ್ಟ ಕ್ರಮಗಳು ಮತ್ತು ಸೂಚಕಗಳ ಸಮುಚ್ಚಯವನ್ನು ಗುರುತಿಸುವುದು | |
| ಆರಂಭಿಕ ಮಕ್ಕಳ ಅಭಿವೃದ್ಧಿ ಕಾರ್ಯಕ್ರಮಗಳ ಮಾದರಿಗಳ ವೆಚ್ಚವನ್ನು ಅಂದಾಜು ಮಾಡಲು ವಿಧಾನವೊಂದನ್ನು ರಚಿಸುವುದು ಮತ್ತು ಪರೀಕ್ಷಿಸುವುದು | |

ECD, ಮಕ್ಕಳ ಆರಂಭಿಕ ಬೆಳವಣಿಗೆ

ಎರಡೂ ಸಂದರ್ಭಗಳಲ್ಲಿ, ಲೇಖಕರು ವಿವಿಧ ಸನ್ನಿವೇಶಗಳಲ್ಲಿ ಉತ್ತಮ ನಿಯಂತ್ರಿತ ಪ್ರಯೋಗಗಳಲ್ಲಿ ಗಮನವನ್ನು ಕೇಂದ್ರೀಕರಿಸಿದ ಶಾಲಾಪೂರ್ವ ಕಾರ್ಯಕ್ರಮಗಳ ಕಠಿಣ ಮೌಲ್ಯಮಾಪನಗಳನ್ನು ಪ್ರತಿಪಾದಿಸುತ್ತಾರೆ. ಮಕ್ಕಳು ಗುರಿಗಳನ್ನು ಸಾಧಿಸುವುದನ್ನು ಖಾತರಿಪಡಿಸಲು ಶಿಕ್ಷಕ-ಮಕ್ಕಳ ಸಣ್ಣ ಅನುಪಾತಗಳು, ಶಿಕ್ಷಕರ ತರಬೇತಿ ಮತ್ತು ಮೇಲ್ವಿಚಾರಣೆ, ಸಾಕ್ಷ್ಯ ಆಧಾರಿತ ಪಠ್ಯಕ್ರಮದ ಅನುಷ್ಠಾನ ಮತ್ತು ಮಕ್ಕಳು ಗುರಿಗಳನ್ನು ಸಾಧಿಸಲು ಸಾಕಷ್ಟು ತೀವ್ರತೆ ಮತ್ತು ಅವಧಿಯನ್ನು ಒಳಗೊಂಡಂತೆ ಉತ್ತಮ ಗುಣಮಟ್ಟವನ್ನು ಇಬ್ಬರೂ ಶಿಫಾರಸು ಮಾಡುತ್ತಾರೆ. ಪೋಷಕರನ್ನು ತೊಡಗಿಸಿಕೊಳ್ಳಬೇಕು ಮತ್ತು ಕಾರ್ಯಕ್ರಮಗಳನ್ನು ರಾಷ್ಟ್ರೀಯ ಶಿಕ್ಷಣ ಅಥವಾ ಆರೋಗ್ಯ ವ್ಯವಸ್ಥೆಗಳಲ್ಲಿ ಸಂಯೋಜಿಸಬೇಕೆಂದು ಸಹ ಇಬ್ಬರೂ ಶಿಫಾರಸು ಮಾಡುತ್ತಾರೆ.

ಸಂಕ್ಷಿಪ್ತವಾಗಿ ಹೇಳುವುದಾದರೆ, ಬಡತನ ಕಡಿಮೆ ಮಾಡುವುದೆಂದರೆ ಶಾಲಾ ಸಿದ್ಧತೆಯನ್ನು ಖಚಿತಪಡಿಸಿಕೊಳ್ಳಲು ಔಪಚಾರಿಕ ಶಾಲಾಪೂರ್ವದ ಆರಂಭಿಕ ವರ್ಷಗಳಲ್ಲಿ ಪ್ರಾರಂಭವಾಗುವ ಕುಟುಂಬ ಮತ್ತು ಇತರ ನಿಕಟ ಸನ್ನಿವೇಶಗಳನ್ನು ಒಳಗೊಂಡಿರುವ ಜೀವನ-ಚಕ್ರ ವಿಧಾನದ ಅಗತ್ಯವಿರುತ್ತದೆ, ಮತ್ತು ಬಡತನವನ್ನು ಮಗುವಿನ ಬೆಳವಣಿಗೆ ಮತ್ತು ಶೈಕ್ಷಣಿಕ ಫಲಿತಾಂಶಗಳಿಗೆ ಸಂಬಂಧಿಸುವ ಪರೋಕ್ಷ ಪ್ರಕ್ರಿಯೆಗಳ ಮೇಲೆ ಗಮನವನ್ನು ಕೇಂದ್ರೀಕರಿಸುವುದಾಗಿದೆ. ಎಲ್ಲಾ ಪರಿಸ್ಥಿತಿಗಳಿಗೆ ಅನ್ವಯಿಸಬಹುದಾದ ಯಾವುದೇ ಮ್ಯಾಜಿಕ್ ಇಲ್ಲ. ವೈಯಕ್ತಿಕ ಗುಣಲಕ್ಷಣಗಳು ಮತ್ತು ಸಂದರ್ಭ ಸಂಬಂಧಿತ ಅಂಶಗಳೆರಡೂ ಮಕ್ಕಳು ಶೈಕ್ಷಣಿಕ ಅವಕಾಶಗಳಿಂದ ಹೇಗೆ ಪ್ರಯೋಜನ ಪಡೆಯಬಹುದು ಮತ್ತು ಕಾಲಾನಂತರದಲ್ಲಿ, ಬಡತನದಿಂದ ತಪ್ಪಿಸಿಕೊಳ್ಳಬಹುದು ಎಂಬುದನ್ನು ನಿರ್ಧರಿಸುತ್ತವೆ.

---

**ಪರಿಚಯ**: ಪ್ರಸ್ತುತ ಲೇಖನವು ಮಕ್ಕಳ ಸರ್ವತೋಮುಖ ಬೆಳವಣಿಗೆಯನ್ನು ಪ್ರಭಾವಿಸುವ ಹಲವಾರು ಅಂಶಗಳ ವಿವಿಧ ಆಯಾಮಗಳನ್ನು ಉದ್ದೇಶಿಸಿದೆ. ಮಕ್ಕಳ ಶೈಕ್ಷಣಿಕ ಬೆಳವಣಿಗೆಯಲ್ಲಿ ಕುಟುಂಬ ಹಾಗೂ ಸಮುದಾಯದ ಪಾತ್ರ ಹಾಗೂ ಅವುಗಳ ಕ್ರಿಯಾತ್ಮಕ ಒಳಗೊಳ್ಳುವಿಕೆಯನ್ನು ಪ್ರಮುಖವಾಗಿ ಚರ್ಚಿಸಲಾಗಿದೆ. ಶಾಲಾಸಿದ್ಧತೆಯ ಸುಧಾರಣೆಯ ನಿಟ್ಟಿನಲ್ಲಿ ಕೈಗೊಳ್ಳಬೇಕಾದ ಕ್ರಮಗಳು, ಮಕ್ಕಳ ಪೋಷಣೆ ಮತ್ತು ಆರೋಗ್ಯವನ್ನು ಕುರಿತ ವಿಷಯಗಳಿಗೆ ಹೆಚ್ಚಿನ ಒತ್ತು ನೀಡಲಾಗಿದೆ. ಬಡತನ, ಹಸಿವು, ಕುಟುಂಬಗಳ ಅಸಹಕಾರ ಮುಂತಾಗಿ ಮಕ್ಕಳನ್ನು ಪ್ರಭಾವಿಸುವ ಅನೇಕ ಸಂಗತಿಗಳನ್ನು ಇಲ್ಲಿ ವಿವರಿಸಲಾಗಿದ್ದು, ಅವುಗಳ ನಿವಾರಣೆಗೆ ಸಂಬಂಧಿಸಿದಂತೆ ಗಮನಿಸತಕ್ಕ ಅಂಶಗಳನ್ನು ಇಲ್ಲಿ ಕಾಣಬಹುದು.

**Glossary:**

ಅವಕಾಶದ ಸ್ವರೂಪ - opportunity structure

ನಿಯೋಗ/ ಕತೃತ್ವ - Agency

ಸ್ವತ್ತುಗಳು -assets

ಅಭಿಪ್ರಾಯ ಪ್ರಕಟಿಸುವಂತಹ ಅವಕಾಶ - having a voice

ಚರಾಂಶಗಳು - variables

ಸಂಜ್ಞಾನಾತ್ಮಕ-ಭಾಷೆ - cognitive-language

ಸಾಮಾಜಿಕ-ಭಾವನಾತ್ಮಕ - social-emotional

ಧಾರಣ- retention

ಶಾಲೆ ಬಿಟ್ಟಿರುವುದು - drop-out

ಸ್ವಯಂ-ಆರೈಕೆ - self-care

ಸಮಾಜೀಕರಣ - socializing

ನಿಯಂತ್ರಣ ಪ್ರಕ್ರಿಯೆ - regulatory process

ದುಪ್ಪಟ್ಟು ಅಪಾಯ -double jeopardy

ಬಹು ಕಾರ್ಯವಿಧಾನಗಳು - multiple mechanisms

ಪಾಲಕತ್ವ ಶೈಲಿಗಳು - parenting styles

ಕೌಟುಂಬಿಕ ಹೂಡಿಕೆಯ ಮಾದರಿ family investment model

ಸಾಮಾಜಿಕ ಆಯ್ಕೆ - Social selection

ಕುಟುಂಬದ ಒತ್ತಡದ ಮಾದರಿ - family stress model

ಆರಂಭಿಕ ಪರಿಣಾಮಗಳ ಮಾದರಿ - Early Effects Model

ದೊಡ್ಡ ಮಟ್ಟದ - macro level

ಸಂಚಿತ ಒತ್ತಡದ ಮಾದರಿ - cumulative stress model

ಪರಿಣಾಮಕಾರಿತ್ವ - efficacy

ಪ್ರಕರಣಗಳು- cases

ಹೆಚ್ಚಿನ ಅಪಾಯ - high risk

ಯಾದೃಚ್ಛಿಕ ನಿಯಂತ್ರಣ ವಿನ್ಯಾಸಗಳು - randomized control design

ಪ್ರತಿರಕ್ಷಣೆ - immunization

---